ನೇರವಾಗಿ ನೋಡಲಿಲ್ಲ ವಿಜಯ. ಅವನ ದೃಷ್ಟಿ ತಪ್ಪಿಸಿ ಅತ್ತಿತ್ತ ನೋಡು
ತ್ತಿದ್ದಳು. ಅವಳ ಈ ಪರಿ ಅಶೋಕನಿಗೆ ಹೊಸದು. ಏನೋ ಸಂಶಯ
ಮೂಡಿ, ಬಗ್ಗಿ ಅವಳ ಕಿವಿಯಲ್ಲಿ ಪಿಸುಗುಟ್ಟಿದ.

"ಹೋದ ಕೆಲಸ ಆಗಲಿಲ್ಲೇನು ವಿಜೂ ?" ದನಿಯಲ್ಲಿ ನಿರಾಶ
ಇಣುಕುತ್ತಿತ್ತು.

"ಆಯ್ತಲ್ಲ. ವರ್ಗ ರದ್ದಾದ ಆರ್ಡರ್ ತಂದೇನಿ" ಈಗಲೂ ವಿಜಯ
ಗಂಡನತ್ತ ನೋಡಲಿಲ್ಲ.

'ಹುರ್ರಾ' ಎಂದು ಅಶೋಕ ಕೇಕೆ ಹಾಕಿ ನಕ್ಕ, ಸುತ್ತಮುತ್ತ ಇದ್ದ
ಜನರನ್ನು ಲೆಕ್ಕಿಸದೆ. ಬಯಸಿದ ವಸ್ತು ಕೈಗೆ ಸಿಕ್ಕೊಡನೆ ಹಿಗ್ಗಿ ಕುಣಿ-
ಯುವ ಮಗುವಿನಂತೆ ಕಾಣುತ್ತಿದ್ದ ಗಂಡನನ್ನು ವಿಜಯ ಮೊದಲ ಬಾರಿ
ದಿಟ್ಟಿಸಿ ನೋಡಿದಳು. ಅವನು ಕಣ್ಣು ಮಿಟುಕಿಸಿದ, ಛೀ ! ಮುಗ್ಧ ಮಗು
ವಿನಂಥ ಗಂಡ. ಸುಚೀ, ಸುಷ್ಮಾರ ಜೊತೆಗೆ ಇವನೂ ಒಂದು ಮಗು.
ತನ್ನನ್ನು ಇಷ್ಟೊಂದು ಪ್ರೀತಿಸುವ, ಬಿಟ್ಟು ಇರಲೂ ಇಷ್ಟಪಡದ ಗಂಡನನ್ನು,
ಪುಟ್ಟ ಮಕ್ಕಳನ್ನು ಮರೆತು ನಿನ್ನೆ ರಾತ್ರಿಯೆಲ್ಲಾ ಸಾವನ್ನೇ ಬಯಸಿದ್ದೆನಲ್ಲ
ತಾನು. ಇನ್ನು ಊರಿಗೆ ಹೋಗಲೇಬಾರದು. ಗಂಡನಿಗೆ ಮುಖ ತೋರಿಸಲೇ
ಬಾರದು, ಇಲ್ಲಿಯೇ ಸತ್ತು ಹೋಗಬೇಕು ಎನ್ನುವ ಯೋಚನೆ ತುಂಬಾ
ಕಾಡಿತ್ತು. ಆದರೆ ಸಾಯಲು ಧೈರ್ಯ ಮಾತ್ರ ಬರಲಿಲ್ಲ. ಎಂಥ ಹೇಡಿ
ತಾನು ಎಂದು ತನ್ನ ಬಗ್ಗೆಯೇ ಜಿಗುಪ್ಸೆ ಪಟ್ಟುಕೊಂಡಿದ್ದಳು. ಬಸ್ಸಿಗೆ
ಹತ್ತಿದ ಮೇಲೂ ನಿಜವಾಗಿಯೂ ಎಕ್ಸಿಡೆಂಟ ಆಗಿ ತಾನು ಸಾಯಬಾರದೇ
ಎಂದು ಆಸೆಪಟ್ಟಿದ್ದಳು. ಊಹೂಂ; ಸಾವು ಬರಲಿಲ್ಲ. ತಾನು ಸತ್ತು-
ಹೋಗಿದ್ದರೆ ಈ ಮೂವರ ಪಾಲಿಗೆ ಬದುಕು ಹೇಗಿರುತ್ತಿತ್ತು ? ಅಬ್ಬಾ!
ಊಹಿಸಲು ಸಾಧ್ಯವಿಲ್ಲ. ಆದರೂ ಗಂಡನ ಜೊತೆಗೆ ಹೆಜ್ಜೆ ಹಾಕದೆ ವಿಜಯ
ಅತ್ತಿತ್ತ ನೋಡುತ್ತಿದ್ದಳು.

"ವಿಜೂ ನಿನ್ನೆ ರಾತ್ರೆಲ್ಲಾ ನನಗ ನಿದ್ದೀನ ಬರಲಿಲ್ಲ ವಿರಹ ತಾಪದಿಂದ.
ಒಂದು ರಾತ್ರಿ ನೀ ಇರದಿದ್ದರ ನನಗ ಭಣಭಣಾ ಅನಸತದ. ಇನ್ನ ವರ್ಗ

ರದ್ದು ಆಗಿರದಿದ್ದರ ನಾನು ಹುಚ್ಚ ಆಗಿಬಿಡತಿದ್ದೆ. ಹೌದಲ್ಲೋ ? ಅಲ್ಲs ಏ ಹುಡುಗೀ, ನೀ ನಿದ್ದೀ ಮಾಡಿದಿ ಏನು ? ಅಂ ಖರೇ ಹೇಳು ಮತ್ತ ?"

"ಇಲ್ರೀ ನನಗೂ ನಿದ್ದಿ ಬರಲಿಲ್ಲಾ" ಎಂದಳು ವಿಜಯ ಅತ್ತಿತ್ತ ಹುಡುಕು ನೋಟ ಬೀರುತ್ತ.

"ಅಲ್ಲs ನಾ ಏನೇನೋ ಮಾತಾಡೇ ಮಾತಾಡ್ತೇನಿ. ನೀ 'ಅಂ', 'ಊಂ' ಅಂತೀದಿ. ಯಾಕ? ಏನರೆ ಕಳಕೊಂಡೀ ಏನು? ಏನು ಹುಡುಕತೀ?"

"ಹಾಂ ನಾ ಏನೋ ಕಳಕೊಂಡೀನಿ ಅನಸತಿತ್ತು. ಏನು ಅಂತ ನೆನಪು ಆಗವೊಲ್ಲದಾಗಿತ್ತು. ಈಗ ನೆನಪಾತು ನೋಡ್ರಿ. ನಂದು ಬಿಳೀ ಎಂಬ್ರಾಯ್ಡರಿ ಕರಚೀಪು ಇತ್ತಲ್ಲ. ಅದನ್ನs ಬೆಂಗಳೂರಾಗ ಕಳಕೊಂಡಾಂಗ ಅನಸ್ತದ".

"ಅಯ್ಯs ಹುಚ್ಚೀ, ಕರಚೀಫs, ಹ್ಹ ಹ್ಹ ಹ್ಹ. ಹೋದರ ಹೋಗಲಿ ಬಿಡು. ಅಂಥಾ ಡಜನ್ ಕರಚೀಫ್ ಕೊಡಸತೇನಿ ನಿನಗ. ಮೊದಲ ಮನೀಗೆ ನಡೀ. ಸಂಜೀ, ಸುಷ್ಮಾ ಒಂಟಿಗಾಲಿನ ವ್ಯಾಲೆ ನಿಂತಾರ 'ಅವ್ವ ಯಾವಾಗ ಬರತಾಳ' ಅಂತ. ನಡೀ". ಅವಳ ಭುಜದ ಸುತ್ತ ಕೈಹಾಕಿ ಮನೆಯತ್ತ ನಡೆಸಿದ.

* * *



# ಯಾರ ಮುಂದೂ ಹೇಳಬಾರದು

ಆಫೀಸಿನಿಂದ ಮನೆಗೆ ಬಂದ ಶಿವಮೂರ್ತಿ ನೇರವಾಗಿ ಅಡಿಗೆ ಮನೆಯ ಬಾಗಿಲಿಗೆ ಬಂದು ನಿಂತದ್ದು ಗೊತ್ತಾದರೂ ಶಕುಂತಲ ಹೊರಳಿ ನೋಡಲಿಲ್ಲ.

"ಶಕೂ" ಗಂಡನ ಆತುರದ ಕರೆಗೆ ಕೈಯಲ್ಲಿದ್ದ ಪಾತ್ರೆಯನ್ನು ಕಟ್ಟೆಯ ಮೇಲೆಯೇ ಇಟ್ಟು ನಿಧಾನವಾಗಿ ಅವನತ್ತ ತಿರುಗಿ "ಏನು" ಎನ್ನುವಂತೆ ಹುಬ್ಬು ಏರಿಸಿದಳು. ತೆಳುವಾದ ಹುಬ್ಬು ಏರಿದಾಗ ಇನ್ನೂ ಚೆನ್ನಾಗಿ ಕಂಡಿತು ಶಿವಮೂರ್ತಿಗೆ. ತನ್ನತ್ತ ನೋಡುತ್ತ ಹೇಳಬೇಕಾದುದನ್ನೇ ಮರೆತು ನಿಂತ ಗಂಡನನ್ನು ನೋಡಿ ಏರಿದ ಹುಬ್ಬು ಕೆಳಗಿಳಿಸಿ ಗಂಟಿಕ್ಕಿಸಿದಳು. ಕೂಡಲೇ ಮೂರ್ತಿಯೂ ಎಚ್ಚೆತ್ತ.

"ಶಕೂ, ಇವತ್ತು, ಯಾರು ಭೆಟ್ಟಿ ಆಗಿದ್ದರು ಗೊತ್ತದ ಏನು ?" ಮಾತಿಗೆ ಪೀಠಿಕೆ ಹಾಕಿದ.

ನಿಮಗ ಯಾರ ಭೆಟ್ಟಿ ಆದರು ಅನ್ನೂದು ನನಗ ಹ್ಯಾಂಗ ಗೊತ್ತಾಗ ಬೇಕು ? ನಾ ಏನು ಅಂಥಾ ಜ್ಞಾನಿ ಏನು ?" ಸಿಡುಕುತ್ತ ಮತ್ತೆ ಚಹ ಸೋಸಲು ತಿರುಗಿದಳು.

ಹೆಂಡತಿಯ ಬೆನ್ನ ಮೇಲಿಂದ ತೊಡೆಯವರೆಗೆ ತೂಗಾಡುವ ಜಡೆ-ಯನ್ನು ಹಿಡಿದು ಹತ್ತಿರ ಎಳೆದುಕೊಳ್ಳಬೇಕೆನಿಸಿದರೂ, ಶೂಸು ಕಾಲಲ್ಲಿ ಅಡಿಗೆಮನೆಗೆ ಕಾಲಿಡಬಾರದೆನ್ನುವ ಅವಳ ಆಜ್ಞೆಯನ್ನು ನೆನಪಿಸಿಕೊಂಡು ಸುಮ್ಮನಾದ.

"ಇವತ್ತು ಒಂದು ಸುದ್ದೀ ಹೇಳತೇನಿ. ಅದನ್ನ ಕೇಳಿ ನಿನಗ ಸಂತೋಷ ಆಗ್ತದ. ಭಾಳ ಸಂತೋಷ ಪಡ್ತೀ ಅನ್ನೂದು ನನಗ ಗೊತ್ತದ. ನನಗ ಏನರೆ ಬಹುಮಾನಾ ಕೊಡ್ತೀ ಹೇಳು ? ಏನ ಕೊಡ್ತೀ ?" ಎಂದ.

ಮಗುವಿನಂತೆ "ಏನು ಕೊಡುತ್ತೀ" ಎಂದು ಕೇಳುತ್ತಿದ್ದ ಗಂಡನನ್ನು ನೋಡಿ ಮೋಜೆನಿಸಿ ಶಕುಂತಲಾ ನಾಲಿಗೆ ತೆರೆದು, ಅಣಕಿಸಿದಳು. ತಾನೂ ಸಣ್ಣ ಹುಡುಗಿಯ ಹಾಗೆ. "ಉಹುಂ" ಎಂದು ಗೋಣು ಅಲ್ಲಾಡಿಸಿ ತುಟಿ ಮುಂದೆ ಚಾಚಿ ಬೆರಳಿನಿಂದ ಕೆನ್ನೆ ತಟ್ಟುತ್ತ ತನಗೇನು ಬೇಕು ಎನ್ನುವುದನ್ನು ಮೂರ್ತಿ ತೋರಿಸಿದ.

"ಮೊದಲ, ಸುದ್ದಿ ಏನದು ಹೇಳ್ರಿ. ಆವ್ಯಾಲೆ ನೋಡೂಣಂತ".

"ನೋಡೂಣು ಅಂತ ಅಂದರ ನಾ ಕೇಳಾಂವ ಅಲ್ಲಾ. ನಾ ಕೇಳಿದ್ದು ಇಲ್ಲಾ ಅನಬಾರದು".

"ಹೇಳ್ಯರೆ ಹೇಳ್ರೀ. ಹೇಳ್ರಿ ಅಂದರ ಎಷ್ಟ ವ್ಯಾಳ್ಯೆ ಕಳೀತೀರಿ".

"ನಿಮ್ಮ ವಾಸಂತೀ ಅಕ್ಕನ ಗಂಡ ಭೆಟ್ಟಿ ಆಗಿದ್ದರು".

"ಆಂ, ವಿಶ್ವನಾಥ ಮಾಮಾ ಯಾವಾಗ ಬಂದಾರ ಈ ಊರಿಗೆ ? ಅಕ್ಕನೂ ಬಂದಾಳೇನು ? ಮನೀಗೆ ಯಾಕ ಕರಕೊಂಡು ಬರಲಿಲ್ಲಾ ? ಬರ್ರಿ ಅಂತ ಕರದ್ಯರೋ ಇಲ್ಲೋ ?" ಹತ್ತಿರ ಬಂದ ಶಕೂನನ್ನು ಬಿಡದೆ ತನ್ನ ಕಡೆಗೆ ಎಳೆದುಕೊಂಡು ಬಹುಮಾನ ಗಿಟ್ಟಿಸಿದ ಮೇಲೆಯೇ ಕೋಟು ಕಳಚುತ್ತ ರೂಮಿನತ್ತ ನಡೆದ ಮೂರ್ತಿ. ಅವಳು ಪ್ರಶ್ನೆಗಳಿಗೆ ಉತ್ತರ ತಿಳಿಯಲು ತನ್ನ ಹಿಂದೆ ಬಂದೇ ಬರುತ್ತಾಳೆನ್ನುವುದು ಅವನಿಗೆ ಗೊತ್ತು. ಅಲ್ಲದೆ ಮುಂದಿನ ಮಾತನ್ನು ಸ್ವಲ್ಪ ನಿಧಾನವಾಗಿಯೇ ಅವಳ ಮನಸ್ಸು ನೋಯು-ದಂತೆಯೇ ಹೇಳಬೇಕಾಗಿತ್ತು.

"ನಿನ್ನ ಮಾಮಾಗೆ ದೊಡ್ಡ ಕೆಲಸಾ ಕೊಟ್ಟು, ಅಂದರ ಚೀಫ ಅಕೌಂಟಂಟ ಅಂತ ಬಡ್ತೀ ಕೊಟ್ಟು ಈ ಊರಿಗೆ ವರ್ಗ ಮಾಡಿದರಂತ. ಹದಿನೈದಿಪ್ಪತ್ತು ದಿವಸ ಆದೂವಂತ ಇಲ್ಲಿಗೆ ಬಂದು".

"ಮನೀ ಇನ್ನೂ ಸಿಕ್ಕಿರಲಿಕ್ಕಿಲ್ಲಾ. ಒಬ್ಬರ ಬಂದು ಹೋಟೆಲ್ಲಿನ್ಯಾಗ ಇಳದಾರಂತೇನು ?"

"ಉಹುಂ. ನಿಮ್ಮಕ್ಕನೂ ಬಂದಾರಂತ. ಅವರಿಗೆ ಮನೀ ಹುಡಕೂ ತೊಂದರಿನ ಇಲ್ಲಾ. ಕಂಪನಿಯವರು ಕ್ವಾರ್ಟರ್ಸ್ ಕೊಟ್ಟಾರ. ದೊಡ್ಡ ಕೆಲಸಾ, ಕೆಲಸಕ್ಕ ತಕ್ಕ ಹಾಂಗ ಸೌಕರ್ಯಾನೂ ಇರತದ. ಅವರೇನು ನಮ್ಮ

ಹಾಂಗ ಕಾರಕೂನರ ? ಒಮ್ಮೆ ಮನೀಗೆ ಬರ್ರಿ ಅಂತ ಅಡ್ರೆಸ್ ಕೊಟ್ಟೆ. "ನೋಡೂಣು ಕೆಲಸ ಭಾಳ ಇರತದ" ಅಂದರು.

"ಮಾಮಾ ಅವರು ಹಾಂಗs ಬಿಡ್ರಿ ಯಾವಾಗಲೂ. ಅವರಿಗೆಲ್ಲಿ ಪುರಸೊತ್ತು ಇರತದ. ನಮ್ಮ ತವರ ಮನೀಗೆ ಸುದ್ದಾ ಬರತಿದ್ದಿಲ್ಲಾ. ನಮ್ಮ ಮದುವೀಗೆ ಕಾರು ತೊಗೊಂಡು ಅಕ್ಕನ್ನ, ಮಕ್ಕಳನ್ನ ಕರಕೊಂಡು ಬಂದು ಅಕ್ಕೀಕಾಳು ಹಾಕಿ, ಆಗ ಹೋಗಿದ್ದ ಅಕ್ಕನ್ನ ಜೀವ ನೆನಸತದ, ನೋಡಿ ಭಾಳ ವರ್ಷಾತು". ಧೇನಿಸುತ್ತಿದ್ದ ಶಕುಂತಲಾ ಎಚ್ಚತ್ತು ಗಂಡನಿಗೆ ಚಹ ತರಲು ಓಡಿದಳು.

* * * *

ಅಂದು ಅವಳ ಕಾಲು ನೆಲದ ಮೇಲೆಯೇ ಇರಲಿಲ್ಲ. ಮನಸ್ಸಂತೂ ಕಲ್ಪನಾ ಲೋಕದಲ್ಲೇ ಹಾರಾಡುತ್ತಿತ್ತು. ಗಳಿಗೆಗೊಮ್ಮೆ ಕುರುಳು ತಿದ್ದು-ವದು, ಕುಂಕುಮ ಸರಿಮಾಡಿಕೊಳ್ಳುವದು. ನೀಳವಾದ ಜಡೆಯನ್ನು ಹಿಂದೆ ಹಾಕಿದರೆ ಚಂದವೋ, ಮುಂದೆ ಹಾಕಬೇಕೋ ಎನ್ನುವ ಗಹನ ವಿಚಾರದಲ್ಲಿ ಮುಳುಗುವದು, ಮೇಲಿಂದ ಮೇಲೆ ಸಿಲ್ಕ ಸೀರೆಯ ನೆರಿಗೆ ತೀಡುವದು, ತಲೆಯಲ್ಲಿಯ ಮಾಲೆ ಮುಟ್ಟಿ ನೋಡಿಕೊಳ್ಳುವದು, ಎಲ್ಲವೂ ನಡೆದೇ ಇತ್ತು. ತನ್ನ ಸಂಭ್ರಮ ನೋಡಿ ಮೀನಾಕ್ಷಿ, ಮಾಲತಕ್ಕ, ಅಶೋಕಣ್ಣ, ಶಂಬತ್ತೆ, ದೊಡ್ಡಣ್ಣ, ಅವ್ವ, ಒಟ್ಟಿನಲ್ಲಿ ಮನೆಯಲ್ಲಿಯ ಸಮಸ್ತರೂ ತಲೆಗೊಂದು ಮಾತಾಡಿ ತನ್ನನ್ನು ಕಾಡಿಸುತ್ತಿದ್ದರು. ಕಡೆಗೆ ಅಪ್ಪ ಕೂಡ ಮೀಸೆಯ ಮರೆಯಲ್ಲಿ ಮುಗುಳು ನಕ್ಕಿದ್ದರು.

ಇವರಿಗೆಲ್ಲಾ ನಗೆಯಾದರೆ ತನಗೆ ಮನಸ್ಸಿನ ತುಂಬಾ ಚಿಂತೆ. ಇವತ್ತು ತನ್ನನ್ನು ನೋಡಲು ಬರುವ ವರ ಮಹಾಶಯ ಹೇಗಿರಬಹುದು ? ಕೆಂಪಗೆ, ಎತ್ತರವಾಗಿ ವಾಸಂತಿ–ಅಕ್ಕನ ಗಂಡನ ಹಾಗಿದ್ದರೇ ಬಹಳ ಚೆಂದ. ಕಪ್ಪಾಗಿ ಕುಳ್ಳಾಗಿದ್ದರೆ ತನಗೆ ಬೇಡವೆ ಬೇಡ. ಆದರೆ ತಾನು ಹಾಗೆಲ್ಲ ಬೇಡ ಎಂದರೆ ಹೇಗೆ ? ಅಪ್ಪ, ದೊಡ್ಡಪ್ಪ ಸುಮ್ಮನಿದ್ದಾರೆಯೇ? ಆ ತುಂಬಿದ ಮನೆಯಲ್ಲಿ. ಮದುವೆಯಾಗುವ ಹುಡುಗಿಯರು ಇನ್ನೂ ನಾಲ್ಕು ಜನ ಇದ್ದಾರಲ್ಲ ಉಹುಂ, ವರನಿಗೆ ನೀಳ ಮೂಗು, ಗುಂಗುರು ಕೂದಲು ಇರಬೇಕು.

ನೋಡಲು ಸುಂದರನಾಗಿರಬೇಕು, ದೊಡ್ಡ ನೌಕರಿಯೂ ಇರಬೇಕು. ಇಬ್ಬರೂ ಜೋಡಿಯಾಗಿ ಹೊರಟರೆ ಜನ ತಮ್ಮನ್ನೇ ನೋಡುವಂತಿರಬೇಕು. ಪರಿಚಿತರು, ಬಂಧು-ಬಳಗದವರೆಲ್ಲಾ "ಹೇಳಿ ಮಾಡಿಸಿದ ಜೋಡಿ ನೋಡ್ರಿ ಇದು. ದಂಪತಿಗಳು ಇದ್ದರೆ ಹೀಗಿರಬೇಕು" ಎನ್ನಬೇಕು.

ನಮ್ಮ ವಾಸಂತಿ ಅಕ್ಕ-ವಿಶೂ ಮಾಮಾನದು ಅಂಥಾ ಜೋಡಿ. ಅಕ್ಕನ ಕಣ್ಣು, ಹುಬ್ಬು, ತುಟಿ, ಮೂಗು ಎಲ್ಲ ತಿದ್ದಿ ತೀಡಿದ ಹಾಗೆ. ಮೈ ಬಣ್ಣವಂತೂ ಕೈ ತೊಳೆದು ಮುಟ್ಟಬೇಕು. ಆ ಕಪ್ಪು ಕಣ್ಣುಗಳು ನೋಡಿದ ಕೂಡಲೇ ಮೋಡಿ ಹಾಕುತ್ತವೆ. ಇಂಥ ಸುಂದರಿ ನಮ್ಮ ಮನೆಯಲ್ಲಿಯೇ ಕಪ್ಪಾಗಿದ್ದ ದೊಡ್ಡಮ್ಮನಿಗೆ ಮಗಳಾಗಿದ್ದುದು ಆಶ್ಚರ್ಯದ ಸಂಗತಿಯೇ. ಅಕ್ಕನನ್ನು ದಾರಿಯಲ್ಲಿ ನೋಡಿಯೇ ವಿಶೂ ಮಾಮಾ ತನ್ನ ಕಕ್ಕನನ್ನು ನಮ್ಮ ಮನೆಗೆ ಹೆಣ್ಣು ಕೇಳಲು ಕಳಿಸಿದ್ದು. ದೊಡ್ಡಮ್ಮನ ಭಾಗ್ಯವನ್ನು ಅವ್ವ, ಚಿಕ್ಕಮ್ಮ ಎಲ್ಲರೂ ಹೊಗಳಿದ್ದೇ ಹೊಗಳಿದ್ದು. ಸುಶಿಕ್ಷಿತ, ಸುಂದರ, ಕೈತುಂಬ ಸಂಬಳ ತರುವ ಅಳಿಯ ಮನೆ ಬಾಗಿಲಿಗೇ ಹೆಣ್ಣು ಕೇಳಲು ಬಂದಾಗ ತಡವಾಗುವದೇ ? ಎಂಟೇ ದಿನಗಳಲ್ಲಿ ಮದುವೆ ನಡೆದು ಹೋಗಿತ್ತು.

"ಬಾ ಶಕೂ, ಅವರೆಲ್ಲಾ ಬಂದು ಕೂತಾರ" ದೊಡ್ಡಮ್ಮ ಬಂದು ಕರೆಯುವವರೆಗೆ ತನಗೆ ಎಚ್ಚರವೇ ಇರಲಿಲ್ಲ. "ಏನೇನೋ ಯೋಚನೆಯೊಳಗೆ ಮುಳುಗಿ ಮೊದಲು ಅವರನ್ನು ಕಿಡಿಕಿಯೊಳಗಿನಿಂದ ನೋಡಲೇ ಇಲ್ಲಲ್ಲ" ಎನ್ನುವ ಕಳವಳದೊಡನೆ, ಮತ್ತೆ ಹೇಗಿದ್ದಾರೋ ಎನ್ನುವ ಕುತೂಹಲ-ಮಿಶ್ರಿತ ಭಯದೊಡನೆ ತಲೆ ತಗ್ಗಿಸಿಕೊಂಡು ಹೊರಗೆ ಹೋಗಿದ್ದಳು. "ತಂಗೀ ಮಾರೀ ಮ್ಯಾಲ ಎತ್ತವ್ವಾ" ಎಂದಾಗ ತಲೆ ಎತ್ತಿ ನೋಟವನ್ನು ಅತ್ತಿತ್ತ ಮಿಂಚಿಸಿದ್ದಳು. ಸರಿ, ಅವರ ಗುರುತು ಹತ್ತಿತ್ತು. ಸುಂದರ ಎನ್ನುವ ಸಾಲಿನಲ್ಲಿ ಬರದಿದ್ದರೂ, ನಗುವ ಕಣ್ಣುಗಳಿಂದ ಕಳೆಕಳೆಯಾಗಿದ್ದರು. ಮನಸ್ಸಿನ ಮೂಲೆಯಲ್ಲಿ ನಿರಾಶೆ ಹಣಕಿತು. ಆದರೆ ಸಂಜೆಯೊಳಗೆ ಹುಡುಗ ಒಪ್ಪಿದ್ದಾನೆ, ಮದುವೆಯ ಮಾತುಕತೆ ಮುಂದುವರಿಯಬೇಕು ಎನ್ನುವ ವಿಷಯ ಮನೆಯವರೆಲ್ಲರಲ್ಲಿ ಚರ್ಚೆಯಾಗಿತ್ತು. ತಾನು ಅವರ ಚೇಷ್ಟೆಯ

ವಸ್ತುವಾಗಿ, ಬದುಕು ತುಂಬ ಸುಂದರವಾಗಿ ಕಂಡು ನಿರಾಶೆ ಬೆನ್ನು ತೋರಿತ್ತು.

ಹೆಂಡತಿಯ ತುಟಿಗಳಲ್ಲಿ ನಗು ಇನ್ನೂ ಅರಳಿ ನಿಂತಾಗ ಮೂರ್ತಿ ಅವಳನ್ನು ಹತ್ತಿರ ಎಳೆದುಕೊಂಡು,

"ಏ ಹುಡುಗೀ. ಇವತ್ತು ಇಷ್ಟು ಸಂತೋಷ ಆಗೇದಲ್ಲ ನಿನಗ. ಆಗಿಂದ ನೋಡ್ತೀನಿ ಕುಲು ಕುಲು ನಕ್ಕs ನಗತೀ. ಅಕ್ಕ-ಮಾವಾ ಅಂದರ ಎಷ್ಟು ಪ್ರೀತಿ ನಿನಗ. ಅವರ ಧ್ಯಾನದಾಗ ಈ ಬಡಪಾಯಿ ಗಂಡನ ನೆನಪು ಸುದ್ದಾ ಇಲ್ಲಾ ನಿನಗ" ಎಂದ. ಗಂಡನ ದನಿಯು ಹಿಂದಿನ ನಿರಾಶೆಯನ್ನು ಹೀರಿಕೊಳ್ಳುವಂತೆ ಅವನ ತುಟಿಗಳನ್ನು ಚುಂಬಿಸಿದಳು ಶಕೂ. ಮೂರ್ತಿ ಪ್ರಸನ್ನನಾದ.

"ಈ ಭಾನುವಾರ ಅಕ್ಕನ ಮನೀಗೆ ಹೋಗೂಣು".

"ಆಗಲಿ, ಮುಂಜಾನೆ ಸಿಹಿ, ಖಾರ, ಹಣ್ಣು, ಹೂವು ತರ್ತೇನಿ, ಸಂಜೀ ಮುಂದ ಹೋಗೂಣು".

* * *

ಭಾರವಾದ ಕಾಲುಗಳನ್ನೆತ್ತಿ ಹೆಜ್ಜೆ ಇಡುತ್ತಿದ್ದ ಶಕುಂತಲಳನ್ನು ನೋಡಿ ಕನಿಕರದಿಂದ ಮೂರ್ತಿ "ಅಟೋ ಕರೀಲ್ಯಾ ?" ಎಂದ.

"ಬ್ಯಾಡಾ, ಬಸ್ಸಿಗೆ ಹೋದರಾಯ್ತು, ಮತ್ತ್ಯಾಕ ರೊಕ್ಕ ದಂಡ. ಹುಡುಗರು ಇಬ್ಬರs ಏನ್ಮಾಡ್ತಾರೊ ಮನಿಯೊಳಗ" ಎಂದ ಶಕುಂತಲ, ತನ್ನ ಕಣ್ಣು ಕಾಣದಂತೆ ಮುಖ ಅತ್ತ ತಿರುವಿದಳು.

ಅಕ್ಕನ ಮನೆಗೆ ಒಯ್ದ ಪ್ಲಾಸ್ಟಿಕ್ ಬುಟ್ಟಿ ತುಂಬಿದ್ದು ಹಾಗೆಯೇ ತಿರುಗಿ ಬಂದಿತ್ತು. ಮನೆಗೆ ಬಂದೊಡನೆ ಮೌನವಾಗಿ ಪ್ಲೇಟಿನಲ್ಲಿ ತಿಂಡಿ ಹಾಕಿ ಗಂಡ, ಮಕ್ಕಳನ್ನು ಕರೆದು ಕೊಡುತ್ತಿದ್ದ ಹೆಂಡತಿಯ ಮನಸ್ಸಿನ ಆಂದೋಲನವನ್ನು ಅರಿತಿದ್ದ ಮೂರ್ತಿ, "ಬಾ, ನೀನೂ ತೊಗೊ" ಎಂದ. ಹೊಟ್ಟೆ ತುಂಬುವಷ್ಟು ತಿಂದಾದ ಮೇಲೆ "ರಾತ್ರಿ ಅಡಗಿ ಮಾಡಬ್ಯಾಡಾ, ಹಾಲು ನಾನು ಕಾಸತೇನಿ. ನೀನು ರೆಸ್ಟ್ ತೊಗೋ" ಎಂದ.

ಹಾಸಿಗೆಯಲ್ಲಿ ಮಲಗಿ ಕಾಲು ಚಾಚಿದರೂ ಮನಸ್ಸಿಗೆ ರೆಸ್ಟ್ ಇರಲಿಲ್ಲ. ಎಷ್ಟೋ ವರ್ಷಗಳ ಮೇಲೆ ಭೆಟ್ಟಿಯಾದರೂ ಅಕ್ಕ ತಮ್ಮನ್ನು ನೋಡಿ ಸಂತೋಷಪಟ್ಟಂತೆ ಕಾಣಲಿಲ್ಲ. ನಗಲಿಲ್ಲ. ಮನಸ್ಸು ಬಿಚ್ಚಿ ಮಾತಾಡಲಿಲ್ಲ. ಕೇಳಿದ್ದಕ್ಕೆಲ್ಲ ಹಾಂ. ಹೂಂ ಅಷ್ಟೇ ಇತ್ತು ಅವಳ ಉತ್ತರ. ಮಕ್ಕಳಂತೂ ತನಗೆ ಅಪರಿಚಿತರೆನ್ನುವಷ್ಟು ದೊಡ್ಡವರಾಗಿದ್ದರು. ಇವಳು ನಿಮ್ಮ ಚಿಕ್ಕಮ್ಮ, ಇವರೂ ನಮ್ಮವರೇ, ಇವರ ಮನೆಗೆ ಒಮ್ಮೆ ಹೋಗೋಣ ಎನ್ನುವ ಮಾತು ಅವಳ ಬಾಯಿಂದ ಬರಲಿಲ್ಲ. ತಪ್ಪಿ ಬೇರೆ ಯಾರ ಮನೆಗಾದರೂ ಬಂದಿರು-ವೆನೇ ಎನಿಸತೊಡಗಿತ್ತು. ಅವರಲ್ಲಿ ಆತ್ಮೀಯತೆಯಿಲ್ಲ. ಸುಖ-ದುಃಖದ ಮಾತುಕತೆಯಿಲ್ಲ. ದೊಡ್ಡ ಸಾಹೇಬರ ಹೆಂಡತಿಯಾಗಿದ್ದಾಳೆ ಜಂಬ ಬಂದಿರ-ಬೇಕು-ಎನ್ನಬೇಕೆಂದರೆ ಅವಳು ಯಾವ ದೊಡ್ಡಸ್ತನವನ್ನೂ ಕೊಚ್ಚಿಕೊಳ್ಳ-ಲಿಲ್ಲ, ಜಂಭದ ಮಾತಾಡಲಿಲ್ಲ. ಇವಳು ತನ್ನ ಚಿಕ್ಕಂದಿನ, ವಾತ್ಸಲ್ಯದ ಮೂರ್ತಿ ವಾಸಂತಿ ಎನ್ನುವುದನ್ನು ನಂಬಲಿಕ್ಕೇ ಆಗಲಿಲ್ಲ. ಹುಟ್ಟಿದಾಗಿನಿಂದ ದೊಡ್ಡವರಾಗಿ ಗಂಡನ ಮನೆಗೆ ಹೋಗುವವರೆಗೂ ಕೂಡಿಯೇ ಉಂಡು, ತಿಂದು, ಓದಿ, ಆಡಿ, ಬೆಳೆದವರು. ಸ್ವಂತ ಅಕ್ಕ ಮಾಲಗಿಂತಲೂ ವಾಸಂತಿಯ ಮೇಲೆಯೇ ತನಗೆ ಹೆಚ್ಚು ಪ್ರೀತಿ. ಹೂವು, ಹಣ್ಣು , ಸೀರೆ, ಬಳೆ ಏನಿದ್ದರೂ ಇಬ್ಬರೂ ಹಂಚಿಕೊಳ್ಳುತ್ತಿದ್ದೆವು.

ಊರಿಗೆ ಬಂದು ಇಷ್ಟು ದಿನಗಳಾದರೂ ತಮಗೆ ತಿಳಿಸಿಲ್ಲ. ತಮ್ಮ ಮನೆಗೆ ಬಂದಿಲ್ಲ ಎಂದು ಆಕ್ಷೇಪಿಸಿದರೆ "ಏನೋ ಕೆಲಸದಲ್ಲಿ ಬಿಡುವೇ ಸಿಗಲಿಲ್ಲ" ಎಂದು ಬಂದಿತು ಉತ್ತರ. ನಾವು ಇದೇ ಊರಲ್ಲಿ ಇರೋದು ನಿಮಗೆ ಗೊತ್ತಿರಲಿಲ್ಲವೇ ? ಎಂದು ಕೇಳಿ, ಅದಾದರೂ ನಿಜವಾಗಿರಲಿ ಎನ್ನುವ ಆಸೆಯಿಂದ ಕೇಳಿದರೆ "ಹೌದು ಗೊತ್ತಿತ್ತು" ಎಂದು ನಿರಾಸಕ್ತಿ-ಯಿಂದ ಹೇಳಿದಳು. ಅವರ ಮನೆ ಹುಡುಕಲು ತಾವಿಬ್ಬರೂ ತೆಗೆದುಕೊಂಡ ತೊಂದರೆ, ಪಟ್ಟ ಕಷ್ಟ, ವಿವರಿಸಿ ಹೇಳಿದರೆ, ಅದಕ್ಕೆ ಒಳ್ಳೆಯ ಎರಡು ಮಾತಿರಲಿ, ನೀವು ಇಷ್ಟು ತೊಂದರೆ ತೆಗೆದುಕೊಳ್ಳುವ ಆವಶ್ಯಕತೆ ಇರಲಿಲ್ಲ ಎನ್ನುವ ಹಾಗೆ ಅಲಕ್ಷ್ಯದಿಂದ ಒಂದು ತರಹ ನಕ್ಕಳು. ಇನ್ನೇನು ಮಾತಾಡ-ಬೇಕು ತಿಳಿಯದೆ ಹುಡುಕಿ, ಹುಡುಕಿ ಮಾತನಾಡುವ ವಿಷಯಗಳೂ ಮುಗಿ-

ದದ್ದರಿಂದ ಸುಮ್ಮನೆ ಕುಳಿತೆ. ಇವರು ಒಬ್ಬರೇ ಹೊರಗಿನ ಕೋಣೆಯಲ್ಲಿ ಗೋಡೆ ನೋಡುತ್ತಾ ಕುಳಿತಿದ್ದರೇನೋ. ಮಾವಾ ಅಟ್ಟದ ಮೇಲಿನ ರೂಮಿನಲ್ಲಿ ಮಲಗಿ ವಿಶ್ರಾಂತಿ ತಗೆದುಕೊಳ್ಳುತ್ತಿದ್ದರಂತೆ. ಅವರಿಗೆ ತಾವು ಬಂದ ಸುದ್ದಿ ಕೂಡ ಯಾರೂ ಹೋಗಿ ಹೇಳಲಿಲ್ಲ. ಮೌನದಿಂದ ತನಗೆ ಕಸವಿಸಿಯಾಗತೊಡಗಿತು. ಏನೂ ಮಾಡದೆ ಅತ್ತಿತ್ತ ನೋಡುತ್ತ, ಪಿಳಿ ಪಿಳಿ ಕಣ್ಣು ಬಿಡುತ್ತ ಕೂಡ್ರುವದು ತನ್ನಿಂದ ಅಸಾಧ್ಯವಾಯಿತು. ಅಷ್ಟು ದೊಡ್ಡ ಬಂಗಲೆಯಲ್ಲಿ ಗಾಳಿಯ ಸುಳಿವೇ ಇಲ್ಲದಂತೆ ಅನಿಸಿತು. ಉಸಿರಾಡಲು ಹವೆ ಸಾಲದೆ ಉಸಿರು ಕಟ್ಟಿದ ಹಾಗಾಯಿತು. ಹೊರಗೆ ದೂರ ಇಲ್ಲಿಂದ ಎಲ್ಲಿಗಾದರೂ ಸರಿ, ಬಹು ದೂರ–ಓಡಿ ಹೋಗಿ ಬಯಲಿನ, ಸ್ವಚ್ಛ ಹವೆ-ಯನ್ನು ನೀಳವಾಗಿ ಉಸಿರಾಡಿಸಬೇಕು ಎನ್ನಿಸಿ ಮನಸ್ಸು, ದೇಹ ಎರಡೂ ಚಡಪಡಿಸುತ್ತಿದ್ದವು.

ಅಷ್ಟರಲ್ಲಿ ಮಹಡಿಯಿಂದ ಚಟಪಟ ಸಪ್ಪಳವೊಂದು ಕೆಳಗೆ ಇಳಿದು ಬಂದು ಬಚ್ಚಲು ಮನೆಗೆ ಹೋಯಿತು. ನೀರು ಬಿಟ್ಟ ಸದ್ದಾಯಿತು. “ವಾಸಂತಿ” ಎನ್ನುವ ಗಂಭೀರ ಧ್ವನಿಯ ಹಿಂದೆ ಅಕ್ಕ ಓಡಿಹೋದಳು. ತಿರುಗಿ ಬಂದು “ಶಕೂ ನಾವು ಒಂದು ಪಾರ್ಟಿಗೆ ಹೋಗಬೇಕಾಗಿದೆ. ಮರೆತೇ ಬಿಟ್ಟಿದೆ. ಇನ್ನ ಹತ್ತು ನಿಮಿಷದೊಳಗ ರೆಡಿ ಆಗಬೇಕು ನಾನು” ಎಂದು ಕುಂಕುಮ ಭರಣಿ ನನ್ನ ಮುಂದೆ ಹಿಡಿದಳು. ಕುಂಕುಮ ಇಟ್ಟುಕೊಂಡು ನಾನೇ ನಾಚಿಗೆ ಬಿಟ್ಟು “ಈ ತಿಂಡಿ ಹುಡುಗರಿಗೆ” ಎನ್ನುತ್ತಿರುವಾಗಲೇ ಅಕ್ಕ “ಬ್ಯಾಡಾ ಶಕೂ, ನಾವು ಈಗ ಟೀ ಪಾರ್ಟಿಗೆ ಹೋಗತೇವಿ. ಹುಡುಗರೂ ಬರತಾರ, ಸುಮ್ಮನ ಇಲ್ಲೇ ಇಟ್ಟು ತಿಂಡಿ ಯಾಕ ವೇಸ್ಟ ಮಾಡತೀ. ಮನೀಗೆ ಒಯ್ದುಬಿಡು. ನಿನ್ನ ಮಕ್ಕಳು ತಿಂತಾರ” ಅಂದಳು. “ಇನ್ನೊಮ್ಮೆ ಭೆಟ್ಟಿ ಆಗೋಣು. ನಿನ್ನ ಮಕ್ಕಳನ್ನೂ ಕರಕೊಂಡು ಇನ್ನೊಮ್ಮೆ ಬಾ” ಅಂತ ಉಪಚಾರಕ್ಕೂ ಹೇಳಲಿಲ್ಲ. ಅಕ್ಕ–ಅಕ್ಕ ಅಂತ ಪ್ರೀತಿಯಿಂದ ತಾನು ತಿಂಡಿ, ಅಟೋಕ್ಕ ಅಷ್ಟು ರೊಕ್ಕಾ ಖರ್ಚು ಮಾಡಿ, ಗಂಡನ್ನ ಕರಕೊಂಡು ಹೋಗಿ ಬಂದದ್ದಕ್ಕ ಮಂಗಳಾರತಿ ಚಂದಾಗಿ ಆಯ್ತು. ಈ ರೀತಿ ನಡಕೊಳ್ಳಲಿಕ್ಕೆ ತಾನೇನು ಅಂಥಾ ತಪ್ಪು ಮಾಡಿದ್ದೆ? ಮನೆಯವರೆಗೆ ಹೋದರೂ ಮಾವಾನೂ

"ಆರಾಮ ಅದೀ ಏನಮಾ" ಅಂತ ಒಂದು ಮಾತು ಕೇಳಲಿಲ್ಲ. ತಾವು ಸಣ್ಣ ಪಗಾರದವರು. ಅವರಿಗಿಂತ ಕೆಳಗಿನ ಮಟ್ಟದವರು ಅಂತ ಮಾಮಾ ಜಂಭ ಮಾಡಿದರೂ ವಾಸಂತಿ ತನಗೆ ಅಕ್ಕ ಅಲ್ಲೇನು ? ರಕ್ತ-ಸಂಬಂಧ ಪೂರ್ಣ ಅಳಿಸಿ ಹಾಕಿದಾಂಗ ಮಾಡಿದಳಲ್ಲ ?

"ಹುಚ್ಚಿ, ಇಷ್ಟಕ್ಕೆಲ್ಲಾ ಅಳತಾರೇನ ?" ಬಿಕ್ಕುತ್ತಿದ್ದ ಶಕೂನನ್ನು ಮೂರ್ತಿ ಎಬ್ಬಿಸಿ, ಎದೆಗೆ ಒರಗಿಸಿಕೊಂಡು ಕಣ್ಣೀರು ಒರೆಸಿದ.

ಮುಂದೆ ಆರೆಂಟು ತಿಂಗಳು ಕಳೆದರೂ ಅಕ್ಕನ ಹೆಸರು ಒಂದು ದಿನವೂ ಎತ್ತಲಿಲ್ಲ ಶಕುಂತಲ. ಇನ್ನೊಂದು ದಿನ ಮೂರ್ತಿ ಬಂದು ಹೇಳಿದ ಸುದ್ದಿ ಭೀಕರವಾಗಿತ್ತು. ಮಾಮಾ ಟೂರಿಗೆ ಹೋದಾಗ ಅಕ್ಕ ಒಬ್ಬಳೇ ಮಕ್ಕಳೊಡನೆ ಇದ್ದಾಗ ಅವರ ಮನೆಗೆ ಕಳ್ಳರು ಹೊಕ್ಕಿದ್ದರು. ಬಾಗಿಲ ಕಾಯಲು ಮಲಗಿದ್ದ ಆಳನ್ನು ಹೊಡೆದು, ಮನೆ ಬಾಗಿಲು ಮುರಿದು ಒಳ ಹೊಕ್ಕು, ಅಕ್ಕನ್ನ ಬೆದರಿಸಿ, ಹೊಡೆದು ಕೀಲಿಕೈ ಇಸಿದುಕೊಂಡು ಬಂಗಾರ, ಬೆಳ್ಳಿ, ಕ್ಯಾಷ್ ಎಲ್ಲವನ್ನೂ ಹೊತ್ತು ಒಯ್ದಿದ್ದರು. ಅಕ್ಕನಿಗೆ ಪೆಟ್ಟು ಬಹಳ ವಾಗಿ ಆಸ್ಪತ್ರೆಯಲ್ಲಿದ್ದಳು. ಶಕೂನ ಜೀವ ತಳಮಳಿಸಿತು. ಹೊಟ್ಟೆಯಲ್ಲಿ ಸಂಕಟವಾಯಿತು. ಏನಾದರೂ ತನ್ನ ಪ್ರೀತಿಯ ಅಕ್ಕ. ಕೂಡಿ, ಆಡಿ ಬೆಳೆದವರು. ಪೆಟ್ಟಾಗಿ ಆಸ್ಪತ್ರೆಯಲ್ಲಿದ್ದಾಳೆ. ಎಷ್ಟು ತೊಂದರೆಯಾಗಿದೆಯೋ ಏನೋ. ದೊಡ್ಡಪ್ಪ ತೀರಿಕೊಂಡು ಬಹಳ ವರ್ಷ ಕಳೆದಿವೆ. ದೊಡ್ಡಮ್ಮ ಬಂದಿರಲಿಕ್ಕಿಲ್ಲ. ಹೊಸ ಮೊದಲಗಿತ್ತಿಯಾಗಿ ವಾಸಂತಿ ಗಂಡನ ಮನೆಗೆ ಬಂದಾಗ ಅವಳೊಡನೆ ಹೋಗಿ ಬಂದ ದೊಡ್ಡಮ್ಮ ತಿರುಗಿ ಮಗಳ ಮನೆಗೆ ಹೋಗಿರಲಿಲ್ಲ. ಅಕ್ಕನ ಚೊಚ್ಚಲು ಬಾಣಂತಿತನವೂ ಗಂಡನ ಮನೆಯಲ್ಲಿಯೋ ಆಗಿತ್ತು. ಹೆಂಡತಿಯನ್ನು ಹೆಚ್ಚು ದಿನ ಬಿಟ್ಟಿರಲಾರದ ಮಾಮಾ ಅವಳನ್ನು ಎಂದೂ ತೌರಿಗೆ ಕಳುಹಿಸುತ್ತಿರಲಿಲ್ಲ. ಅಷ್ಟು ಪ್ರೀತಿ ಅವರಿಗೆ ಅಕ್ಕನ ಮೇಲೆ. ತಾನೀನ ಹೋಗಿ ಅವಳನ್ನು ನೋಡಬೇಕು. ಇಂಥ ಹೊತ್ತಿನಲ್ಲಿ ತಾನು ಹೋಗಿ ಸಹಾಯ ಮಾಡಿದರೆ ಅಕ್ಕನ ಮನಸ್ಸು ಬದಲಾದೀತು. ಮೃದುವಾದೀತು. ಎನ್ನುವ ಆಸೆ ಶಕುಂತಲೆಗೆ.

ಹೆಂಡತಿಯ ಮುಖವನ್ನು ನೋಡಿ ಭಾವನೆಗಳನ್ನು ಓದಿಕೊಳ್ಳಬಲ್ಲ ಮೂರ್ತಿ "ಲಗೂ ತಯಾರಾಗು ಶಕೂ. ನಾವು ಆಸ್ಪತ್ರೆಗೆ ಹೋಗೂಣು" ಎಂದ.

ವಾಸಂತಿಯ ತಲೆಗೆ ನಾಲ್ಕಾರು ಹೊಲಿಗೆ ಬಿದ್ದು, ಬ್ಯಾಂಡೇಜು ಕಟ್ಟಿದ್ದರು. ಮುಂಗೈಗಳಲ್ಲಿ ಬಳೆಚೂರು ನಟ್ಟು ಗಾಯಗಳಾಗಿದ್ದವು. ಕಣ್ಣು ಮುಚ್ಚಿ ಸಣ್ಣಗೆ ನರಳುತ್ತಿದ್ದಳು ವಾಸಂತಿ. ಹತ್ತಿರ ಯಾರೂ ಇರಲಿಲ್ಲ.

ಶಕೂನನ್ನು ಕಂಡ ಕೂಡಲೇ ವಾಸಂತಿಯ ಕಣ್ಣು ತುಂಬಿ ಬಂದವು. ಹತ್ತಿರ ಬಂದು ಕುಳಿತು, ಅವಳ ಹಣೆಯ ಮೇಲೆ ಕೈಯಾಡಿಸಿ ಮೃದುವಾಗಿ "ಅಕ್ಕಾ ನೋವು ಭಾಳ ಆಗ್ತದೇನು ?" ಎಂದು ಶಕೂ ಕೇಳಿದಾಗಲಂತೂ ಅವಳ ಕಣ್ಣೀರ ಕೋಡಿ ಹರಿಯಿತು. ಹತ್ತಿರ ತಂಗಿಯ ಗಂಡ ನಿಂತಿಪ್ಪರೂ, ಅವಳ ಕೈ ಹಿಡಿದು ಮಗುವಿನಂತೆ ಬಿಕ್ಕಿ ಬಿಕ್ಕಿ ಅಳುತ್ತಲೇ ಇದ್ದಳು. ಮೃದು ಮನಸ್ಸಿನ ಮೂರ್ತಿ ಅಲ್ಲಿ ನಿಲ್ಲಲಾರದೆ ಮುಖ ತಗ್ಗಿಸಿಕೊಂಡು ಹೊರಗೆ ವರಾಂಡಕ್ಕೆ ಹೋದ. ಸೆರಗಿನಿಂದ ತನ್ನ ಕಣ್ಣೀರು, ಅಕ್ಕನ ಕಣ್ಣೀರು ಒರೆಸುತ್ತ ಶಕುಂತಲ "ಅಳಬ್ಯಾಡಕ್ಕ" ಎನ್ನುತ್ತ ತಾನೇ ಅತ್ತಳು.

"ನೀ ಇನ್ನ ನನ್ನ ನೋಡಲಿಕ್ಕೆ ಬರೂದಿಲ್ಲಂತ ತಿಳಕೊಂಡಿದ್ದೆ" ಎಂದು ವಾಸಂತಿ ಅಂದಾಗ, ಮತ್ತೆ ಅವರ ಮನೆಗೆ ಹೋದ ದಿನ ಇನ್ನೆಂದೂ ತಾನು ಅವರ ಮನೆಗೆ ಹೋಗಲೇಬಾರದು ಎಂದುಕೊಂಡಿದ್ದು ನೆನಪಾಯಿತು. ಅಂದಿನ ಅಕ್ಕ ಇವಳೇನೇ ? ಛೇ, ಅವಳೇ ಬೇರೆ, ಇವಳೇ ಬೇರೆ. ತನ್ನ ಅಕ್ಕ ಎಷ್ಟೊಂದು ರೂಪು ತೊಡುತ್ತಾಳೆ ! ಇವಳು ತನ್ನ ಅಕ್ಕ—ತನ್ನ ಪ್ರೀತಿಯ ವಾಸಂತಿ ಅಕ್ಕ. ಮತ್ತೆ ಮತ್ತೆ ಪ್ರೀತಿಯಿಂದ ಅಕ್ಕನ ಕೈ ಸವರಿದಳು ಶಕುಂತಲ. ವಾಸಂತಿಯ ದುಃಖ ಕಡಿಮೆಯಾಗಿತ್ತು. ಸ್ನೇಹ ವಾತ್ಸಲ್ಯಗಳ ಪ್ರವಾಹ ತುಂಬಿ ಹರಿಯಿತು.

"ರಾಣೀ ನೀ ನನ್ನ ಮ್ಯಾಲೆ ಸಿಟ್ಟಾಗಿಲ್ಲಲ್ಲಾ" ಎಂದಳು ವಾಸಂತಿ. ಬಾಲ್ಯದಲ್ಲಿಯಂತೆ ತನ್ನನ್ನು ಮತ್ತೆ ರಾಣೀ ಎಂದು ಅಕ್ಕ ಕರೆದಾಗ ಶಕುಂತಲ ಕರಗಿ ಹೋದಳು. ಮಾತು ಬಾರದೆ ಇಲ್ಲವೆಂದು ಗೋಣು ಅಲ್ಲಾಡಿಸಿದಳು.

"ನೀವಿಬ್ಬರೂ ಗಂಡ-ಹೆಂಡತಿ ನಮ್ಮ ಮನೀಗೆ ಬಂದಾಗ ನಡೆದದ್ದು ನೆನಪಾದರ ನನಗೆ ಇನ್ನೂ ಜೀವ ಚಡಪಡಿಸ್ತದ. ನಿಮಗೆ ನಮ್ಮಲ್ಲೆ ಒಳ್ಳೇ ಮಾತು, ಆತಿಥ್ಯ, ಒಂದು ಕಪ್ಪು ಚಹಾ ಯಾವದೂ ಸಿಗಲಿಲ್ಲಾ. ನಿನ್ನ ಗಂಡ ನಿನ್ನ ಎಷ್ಟು ಬಯ್ತಾರೋ ಅಂತ ನನಗೆ ಹೆದರಿಕೆ ಆಗಿತ್ತು. ಅವತ್ತು ನಿನ್ನ ಗಂಡ ನಿನ್ನ ಹೊಡೆದರೇನು ? ಭಾಳ ಹೊಡೆದಿರಬೇಕು ಅಲ್ಲಾ ?"

ವಾಸಂತಿಯ ಪ್ರಶ್ನೆಗೆ ಶಕುಂತಲ ಅಗಲವಾಗಿ ಕಣ್ಣರಳಿಸಿದಳು.

"ಇಲ್ಲಕ್ಕಾ. ಅವರ್‍ಯಾಕ ಹೊಡೀತಾರ ? ಅವರೆಂದೂ ನನಗ ಒಂದು ಪೆಟ್ಟೂ ಕೊಟ್ಟಿಲ್ಲಾ. ನನ್ನ ಮನಸ್ಸು ಎಂದೂ ನೋಯಿಸೂದಿಲ್ಲಾ ಅವರು. ಅವತ್ತು ಕೆಟ್ಟ ಅನಿಸಿ ನಾನು ಭಾಳ ಅತ್ತೆ. ಅವರು ಎಷ್ಟು ರಮಿಸಿದರು ಅಂದೀ. ಮರೆತುಬಿಡು ಅದನ್ನೆಲ್ಲಾ ಅಂದರು".

"ಪುಣ್ಯ ಮಾಡಿ ಬಂದೀಯವ್ವಾ ಇಂಥಾ ಗಂಡ ಸಿಕ್ಕಾರ. ನಾನು ನೋಡು ದುರ್ದೈವಿ. ಯಾಕಾದರೂ ದೇವರು ನನ್ನ ಉಳಿಸಿದನೋ ಅನಸತದ. ನೆತ್ತಿಗೇ ಏಟು ಬಿದ್ದಿದ್ದರ ಒಂದು ಹೊಡತಕ್ಕ ಖಲಾಸ ಆಗತಿದ್ದೆ" ಹೃದಯವನ್ನು ಸೀಳಿಕೊಂಡು ಬಂದ ನಿರಾಶೆಯ ದನಿಯಲ್ಲಿ ವಾಸಂತಿ ನರಳಿದಳು.

"ಅಕ್ಕಾ ಹಾಂಗ ಅನಬ್ಯಾಡಾ, ದೇವರಂಥಾ ಗಂಡ, ಮುತ್ತಿನಂಥಾ ಮಕ್ಕಳು ಇದ್ದಾರ. ಕೆಟ್ಟದ್ದು ಬಯಸಬ್ಯಾಡಾ, ಬಂಗಾರ, ಬೆಳ್ಳಿ ಹೋದರ ಏನಾಯ್ತು ? ಕಳ್ಳರು ನಿನ್ನ ಜೀವಾ ಉಳಿಸ್ಯಾರಲ್ಲ ಅಷ್ಟೇ ಸಾಕು. ದೇವರು ದೊಡ್ಡಾಂವ ಅದಾನ".

"ಏನಂದೀ ಶಕೂ, ದೇವರಂಥಾ ಗಂಡನ ? ಹ್ಹ ಹ್ಹ ಪಾಪ, ನಿನಗೇನು ಗೊತ್ತು ? ಕಳ್ಳರು ನನ್ನ ಹೊಡದಾರ ಅಂತ ತಿಳಕೊಂಡೀ ಏನು ನೀನು ? ಹುಚ್ಚೀ ನೀನು ಹುಚ್ಚಿ. ಪ್ರಪಂಚ ಹ್ಯಾಂಗ ಅದ ನಿನಗ ಗೊತ್ತಿಲ್ಲಾ ಶಕೂ. ನನ್ನ ಹೊಡೆದು ಈ ಆಸ್ಪತ್ರೆಗೆ ಹಾಕಿದವರು ಕಳ್ಳರಲ್ಲಾ ಶಕೂ. ನಿನ್ನ ಮಾವಾ ಹೊಡೆದಾರ, ನನ್ನ ಗಂಡ".

ಶಕೂ ಸಿಡಿಲು ಬಡಿದವಳಂತೆ ಕುಳಿತಾಗ ವಾಸಂತಿ ಬಡಬಡಿಸುತ್ತಿದ್ದಳು. "ಇದನ್ನ ಯಾರ ಮುಂದೂ ಹೇಳಿಲ್ಲಾ ನಾನು. ಬಂಗಾರ, ಬೆಳ್ಳಿ ಕಳ್ಳರಿಗೆ ಒಯ್ಯಲಿಕ್ಕೆ ಬಿಟ್ಟೆ ಅಂತ ನನ್ನ ಹೊಡೆದರು. ನಾನು ಮೊದಲು ಮೇಜಿನ ಕೀಲಿಕೈ ಕೊಡಲಿಲ್ಲಾ. ಆದರ ಅವರು ನಾಲ್ಕು ಮಂದಿ ಇದ್ದರು. ನಾನು ಒಬ್ಬಳೇ ಹೆಂಗಸು. ಏನು ಮಾಡಲಿ ? ನನಗೆ ಏನೂ ಮಾಡದಿದ್ದರ ಸಾಕು ಅಂತ ಕೀಲಿಕೈ ಕೊಟ್ಟುಬಿಟ್ಟೆ. ಇವರು ನೀನು ಸತ್ತಿದ್ದರೆ ಚಲೋ ಆಗ್ತಿತ್ತು ಅಂತ ಬಯ್ದು, ನನ್ನ ಸಾಯೋಹಾಂಗ ಹೊಡೆದರು. ಆದರ ಇನ್ನೂ ಆಯುಷ್ಯ ಗಟ್ಟಿ ಅದ ನಂದು, ನನ್ನ ಹೊಡಿಯೂದು, ಒದಿಯೂದು ಮದುವಿ ಆದಾಗಿಂದ ನಡದದ. ತಂಗೀ, ನಾನು ಸಂಸಾರದ ಗುಟ್ಟು ಬಿಟ್ಟು ಕೊಟ್ಟಿದ್ದಿಲ್ಲಾ. ತವರ ಮನೀಯಿಂದ ದೂರ ಮಾಡಿದರು. ಬಳಗದವರನ್ನು ಹಚಿಕೋಬಾರದು, ಬಂದರ ಮಾತಾಡಬಾರದು ಅಂತ ಅಪ್ಪಣೆ ಮಾಡಿದರು. ಎಲ್ಲಾದಕ್ಕೂ ಬಗ್ಗಿದೆ. ಹನ್ನೆರಡು ವರುಷ ತಪಸ್ಸು ಮಾಡಿದೆ ತಂಗೀ. ಆದರೂ ದೇವರು ಒಲೀಲಿಲ್ಲಾ. ಅವರ ಮನಸ್ಸು ಕರಗಲಿಲ್ಲಾ. ನನ್ನ ದೇಹ ಮಾತ್ರ ಬೇಕು. ನನ್ನ ಮನಸ್ಸು, ಭಾವನಾ, ಆಶಾ ಯಾವದನ್ನೂ ಕೇಳೂದಿಲ್ಲಾ. ಅದಕ ಬೆಲೆ ಕೊಡೂದಿಲ್ಲಾ. ಅವರ ಡ್ರಾಯಿಂಗ ರೂಮಿನ ಶೋಕೇಸಿನ್ಯಾಗಿನ ಗೊಂಬೀ ಹಾಂಗ ನಾನೂ ಒಂದು ಗೊಂಬಿ. ಸೂತ್ರದ ಗೊಂಬಿ. ಅವರು ಹಿಡಿದು ಆಡಿಸಿದಾಂಗ ನಾನು ಆಡಬೇಕು. ನೋಡುವವರ ಕಣ್ಣಿಗೆ ಈ ಆಟ ಭಾಳ ಚಂದ. ಆದರ ನನಗ ? ನಿತ್ಯ ನರಕ. ಅವರು ಕುಣಿಸ್ತಾರ, ನಾ ಕುಣೀತೇನಿ. ಆ ಸೂತ್ರ ಹರಿದು ಹೊರಗೆ ಬರುವಷ್ಟು ಚೈತನ್ಯ ನನಗಿಲ್ಲಾ ಶಕೂ. ಗಂಟು ಭಾಳ ಬಿಗಿ ಅದ. ಕೈ. ಕಾಲು ಎಲ್ಲಾ ಕಟ್ಟಿ ಹಾಕ್ಯಾರ ? ನನಗ ಬಿಡುಗಡೀನ ಇಲ್ಲಾ. ಇದನ್ನ ಯಾರ ಮುಂದ ಹೇಳಲಿ ? ನನ್ನವರು ಅಂತ ನನಗ ಯಾರ ಅದಾರ ?—ಅಂತ ಅಳತಿದ್ದೆ. ಇವತ್ತು ನಿನ್ನ ಮುಂದ ತೋಡಿಕೊಂಡೆ. ಮನಸ್ಸಿನ ಭಾರ ಇಳೀತು, ಎದಿ ಹಗೂರಾತು. ಆದರ ಆಣಿ, ನನ್ನ ಆಣಿ ಅಗೇದ. ನೀ ಯಾರ ಮುಂದೂ ಹೇಳಬಾರದು. ಹಾಂ ತಿಳೀತೇನು ? ಕೈ ಮ್ಯಾಲೆ ಕೈ ಹಾಕು. ಇದನ್ನೆಲ್ಲಾ ಯಾರ ಮುಂದೂ ಹೇಳಬಾರದು".

ಅಸ್ಪಷ್ಟವಾಗಿ. ದೂರದಿಂದ ಕೇಳುತ್ತಿದ್ದ ಟಕ್ ಟಕ್ ಬೂಟಿನ ಸಪ್ಪಳ ಜೋರಾಗುತ್ತ ಬಂದು ಬಾಗಿಲ ಹತ್ತಿರ ನಿಂತಿತು. ವಾಸಂತಿ ಮಗ್ಗುಲಿಗೆ ಹೊರಳಿದಳು. ಮುಖ ಕಾಣದಂತೆ ಶಕುಂತಲೆ ತಲೆ ಎತ್ತಿ ನೋಡಿದಳು. ಕರೀ ಮುಸುಡಿಯ ಕೋರೆ ಹಲ್ಲಿನ, ಕೆಂಪು ಕಣ್ಣಿನ, ಟಗರು ಕೂದಲಿನ ದೈತ್ಯಾ-ಕಾರದ ಕುರೂಪಿ–ಜಗತ್ತಿನಲ್ಲಿಯೇ ಅತ್ಯಂತ, ಕುರೂಪಿ–ಮನುಷ್ಯನನ್ನು ಕಂಡ ಶಕುಂತಲ"ಮತ್ತ ಬರ್ತೀನಿ" ಎನ್ನುತ್ತ, ಎದು ,ಅವನತ್ತ ನೋಡದೆ ಬಾಗಿಲು ದಾಟಿ ಹೊರಗೆ ಹೋದಳು.

* * *

# ಸಿರಿ

ನಾನು ಆಗತಾನೇ ಎದ್ದು ಮುಖ ತೊಳೆದುಕೊಳ್ಳುತ್ತಿದ್ದೆ. ಬಾಬು ಅವಸರವಾಗಿ ಓಡಿ ಬಂದು ತೇಕುತ್ತ ಹೊರಬಾಗಿಲಲ್ಲಿ ನಿಂತುಕೊಂಡೇ 'ರಾಯರೆ' ಎಂದು ಜೋರಾಗಿ ಕೂಗಿದ. ನಾನು ಹೊರಗೆ ಬರುವ ಮೊದಲೇ ಬಾಗಿಲಿಗೆ ನೀರು ಹಾಕುತ್ತಿದ್ದ ನನ್ನವಳಿಗೆ ಹೇಳಿದ್ದ "ಅವ್ವ ಹ್ಯಾಂಗ್ಯಾಂಗೋ ಮಾಡತಾರ. ಮಾತಾಡ್ಸಿದರ ಆಡೂದೂ ಇಲ್ಲಾ. ಲಗೂನ ಬರಲಿಕ್ಕೆ ಹೇಳ್ರಿ ರಾಯರಿಗೆ" ಎಂದು ಒಂದೇ ಉಸಿರಿನಲ್ಲಿ ಎಲ್ಲ ಹೇಳಿ ಮತ್ತೆ ಓಡಿಹೋದ, ಸುಮಾ ತಂದುಕೊಟ್ಟ ಚಹದ ಕಪ್ಪು ಹಿಡಿದು ಹೇಳಿದೆ,

"ನಿನ್ನೆ ನಾನು ಮನೀಗೆ ಹೋದಾಗ ಅವ್ವಾಗ ಭಾಳ ತ್ರಾಸಾಗಿತ್ತು. ನಾ ಇಲ್ಲೇ ಇರ್‍ತೀನಿ ಅಂದರ ಕೇಳಲಿಲ್ಲ. ಬಾಬು ಇರ್‍ತಾನ, ನೀ ಮನೀಗೆ ಹೋಗು ಅಂದರು. ನನಗಂತೂ ಏನೂ ಆಸೆ ಉಳಿದಿಲ್ಲ. ಇವತ್ತ ಕಳಿಯೂದು ಕಷ್ಟ ಅಂತ ಡಾಕ್ಟರ ಅಂದಿದ್ದರು. ನಾ ತಿರುಗಿ ಬರೂದು ತಡಾ ಆದರ ನೀ ದಾರೀ ನೋಡಬ್ಯಾಡಾ" ಎಂದು ಹೊರಬಿದ್ದೆ.

"ಅವ್ವಾ" ಎಂದು ಕರೆದಾಗ ಬಹಳ ಕಷ್ಟದಿಂದ ಕಣ್ಣು ತೆರೆಯಲು ನೋಡಿದರು. ಅರೆಗಣ್ಣು ತೆರೆಯಲು ಮಾತ್ರ ಸಾಧ್ಯವಾಯಿತು. ಏನೋ ಹೇಳಲು ತುಟಿ ಅಲುಗಿಸುತ್ತಿದ್ದರು. ಧ್ವನಿ ಹೊರಬರುತ್ತಿರಲಿಲ್ಲ. 'ಡಾಕ್ಟರರನ್ನು ಕರೀತಿನಿ' ಎಂದು ಜೋರಾಗಿ ಹೇಳಿದಾಗ ಬೇಡವೆಂದು ತಲೆ ಅಲುಗಿಸಿದರು, ಎಡಗೈ ಎತ್ತಲಾಗದೆ ಅತ್ತಿತ್ತ ಮಿಸುಕಾಡಿಸಿದರು. ಹತ್ತಿರ ಕುಳಿತು ಬಗ್ಗಿ ಅವರ ಕೈ ಹಿಡಿದೆ. 'ಉಂ' 'ಉಂ' ಎನ್ನುತ್ತಿದ್ದುದು ಕೇಳಿ ಅವರ ಬೆರಳ ಉಂಗುರ ಮುಟ್ಟಿದೆ. ಹೌದೆನ್ನುವಂತೆ ಗೋಣು ಹಾಕಿದರು. ಕೈಸನ್ನೆ, ಬಾಯಿಸನ್ನೆಗಳಿಂದ ಅವರು ಹೇಳುತ್ತಿದ್ದುದನ್ನು ತಿಳಿದುಕೊಂಡೆ. "ಉಂಗುರಾ ಮಾರಿ ಮುಂದಿನ ಕೆಲಸಾ ನಡೆಸಬೇಕs ?" ಎಂದಾಗ 'ಹೂಂ'

ಎಂದು ಅಲುಗಿಸಿದರು. ಸಾವಿನ ಹೊಸ್ತಿಲಲ್ಲಿಯೂ ಒಂದು ಸಮಾಧಾನದ ಕಳೆ ಮುಖದಲ್ಲಿ ಕಂಡಿತು. ಮುಂದೆ ಅರ್ಧ ಗಂಟೆಯಲ್ಲಿ ನಾನು ಹತ್ತಿರ ಕುಳಿತು ನೋಡುತ್ತಿದ್ದಂತೆಯೆ ಜೀವ ಬಿಟ್ಟರು ಅಮ್ಮ. ಅಂಥ ಶಾಂತವಾದ, ಸಮಾ-ಧಾನದ ಸಾವನ್ನು ನಾನು ಅದುವರೆಗೆ ಕಂಡಿರಲೇ ಇಲ್ಲ. ಕಳೆದ ನಾಲ್ಕು ತಿಂಗಳಿಂದಲೂ ಅವರ ಸಾವು ಸಮೀಪಿಸುತ್ತಿದ್ದ ವಿಷಯ ತಿಳಿದಿದ್ದರೂ ಆ ಘಳಿಗೆಯಲ್ಲಿ ಮನಸ್ಸು ಶೂನ್ಯವಾಗಿ ದುಃಖ ತುಂಬಿ ಬಂದು ಕಣ್ಣೀರು ತೊಟ್ಟಿಕ್ಕಿತು. ಮನಸ್ಸಿಗೆ ಸಮಾಧಾನವಾದ ಮೇಲೆ ಕಣ್ಣು ಗಟ್ಟಿಯಾಗಿ ಒತ್ತಿ ಮುಚ್ಚಿ, ಕೈಕಾಲು ಮಡಚಿಟ್ಟು ಮುಂದಿನ ವ್ಯವಸ್ಥೆ ಮಾಡಲು ಹೊರಬಂದೆ.

ಬರೆಯುವ ಟೇಬಲ್ ಮೇಲಿನ ಹಾಳೆಯೊಂದನ್ನು ತೆಗೆದು ಪೆನ್ನು ಓಡಿಸುವ ಮೊದಲು ಒಮ್ಮೆ ವಿಚಾರ ಮಾಡಿದೆ. ಕೊನೆಗೆ ನನ್ನ ಕರ್ತವ್ಯ ನಾನು ಮಾಡಿದರಾಯಿತು, ಅಂತ್ಯಕ್ರಿಯೆಗೆ ಬರುವ, ಬಿಡುವ ವಿಷಯ ಅವರಿಗೆ ಸೇರಿದ್ದು–ಎಂದುಕೊಂಡು ದಿಲ್ಲಿಯಲ್ಲಿರುವ ಅಮ್ಮನ ಸಾಕುಮಗಳು ಶಶಿಕಲಾಗೆ ಟೆಲಿಗ್ರಾಂ ಬರೆದೆ. ಬಾಬೂವಿಂದ ಎಲ್ಲ ಪರಿಚಿತರಿಗೆ ಹೇಳಿ ಕಳಿಸಿದೆ. ಮತ್ತೆ ಬಂದು ರೂಮಿನಲ್ಲಿ ಅಮ್ಮನ ಮಂಚದ ಹತ್ತಿರವೇ ಕುರ್ಚಿ ಎಳೆದು ಕುಳಿತುಕೊಂಡೆ. ಅಮ್ಮನನ್ನು ನೋಡಿದರೆ ಅದು ಶವ ಎನ್ನುವ ಹಾಗಿರಲಿಲ್ಲ. ಕಣ್ಣು ಮುಚ್ಚಿ ನಿದ್ದೆ ಮಾಡುತ್ತಿದ್ದಾರೇನೋ ಎನಿಸುತ್ತಿತ್ತು. ಪ್ರಾಯದಲ್ಲಿ ತುಂಬ ಸುಂದರಿಯಾಗಿರಬೇಕು ಎನ್ನುವ ಲಕ್ಷಣಗಳೆಲ್ಲವೂ ಈ ಐವತ್ತರ ಅಂಚಿನಲ್ಲಿಯೂ ಇದ್ದವು. ನಾನು ಮೊದಲ ಸಲ ಅವರನ್ನು ನೋಡಿದ್ದೇ ಹತ್ತು ವರ್ಷಗಳ ಹಿಂದೆ.

ವಕೀಲ ಉಮಾಪತಿರಾಯರು ಕ್ಲಬ್ಬಿನಲ್ಲಿ ಭೆಟ್ಟಿ ಆಗಿದ್ದಾಗ, ನನ್ನ ತಂದೆ ಅವರ ಹತ್ತಿರ ತಮ್ಮ ಮಗನೊಬ್ಬ ಅದೇ ತಾನೇ ಲಾ ಪರೀಕ್ಷೆ ಮುಗಿಸಿ-ದ್ದಾನೆ. ಕೆಲಸ ಕಲಿತುಕೊಳ್ಳೋದಕ್ಕೆ ನಿಮ್ಮ ಹತ್ತಿರ ಕಳಿಸಿಕೊಡಬೇಕೆಂದು ಆಸೆ ಎಂದು ಹೇಳಿದ್ದರಂತೆ. ಉಮಾಪತಿರಾಯರಂಥ ಹೆಸರುವಾಸಿಯಾದ ವಕೀಲರು ನಮ್ಮ ನಗರನಲ್ಲಿ ಕೇವಲ ಬೆರಳೆಣಿಕೆಯಷ್ಟು ಜನ, ಅಂಥವರ ಹತ್ತಿರ ಕೆಲಸ ಕಲಿತುಕೊಳ್ಳೋದಕ್ಕೆ, ವೃತ್ತಿಯ ಗುಟ್ಟು ತಿಳಿಯೋದಕ್ಕೆ ನನಗೂ ಆಸೆ ಏನೋ ಇತ್ತು. ಆದರೆ ಅವರು ನನ್ನನ್ನು ಕೆಲಸಕ್ಕೆ ಸೇರಿಸಿ

ಕೊಳ್ಳುತ್ತಾರೋ ಇಲ್ಲವೋ ಎನ್ನುವ ಅನುಮಾನವೂ ಇತ್ತು. ಒಂದು ದಿನ ಅಪ್ಪ ನನ್ನನ್ನು ಕರೆದು "ನಾಳೆ ಮುಂಜಾನೆ ಎಂಟೂವರೆ ಗಂಟೆಗೆ ಉಮಾಪತಿ-ರಾಯರ ಮನೆಗೆ ಹೋಗಿ ಭೆಟ್ಟಿಯಾಗು. ನಿನ್ನನ್ನು ಮಾತನಾಡಿಸಿ ನೋಡ್ತೀನಿ ಎಂದು ಹೇಳಿದ್ದಾರೆ" ಎಂದಾಗ ಸಂತೋಷದೊಡನೆ ಹೆದರಿಕೆಯೂ ಆಯಿತು.

ಅವರ ಮನೆಯ ಗೇಟು ತೆಗೆದು ಕಂಪೌಂಡು ದಾಟಿ ಮನೆ ಮೆಟ್ಟಿಲು ಹತ್ತುವವರೆಗೆ ನನ್ನ ಎದೆ ಡವಗುಡುತ್ತಿದ್ದುದೂ, ಮೈ ಬೆವತಿದ್ದುದೂ, ಗಂಟಲು ಒಣಗಿದ್ದುದೂ ನೆನೆಸಿಕೊಂಡು ಮುಂದೆ ಎಷ್ಟೋ ದಿನ ನನ್ನಷ್ಟಕ್ಕೆ ನಾನೇ ನಕ್ಕಿದ್ದೆ. ಅಂದು ಬೆಲ್ ಒತ್ತಿದಾಗ ಬಾಗಿಲು ತೆರೆದವರು 'ಅಮ್ಮ'. ಅದೇ ಸ್ನಾನಮಾಡಿ ಬಂದಿದ್ದರೇನೋ. ತಿಳಿಹಸಿರು ಬಣ್ಣದ ಸೀರೆಯಲ್ಲಿ ಅದೇ ಅರಳಿದ ಗುಲಾಬಿಯಂತೆ ಶುಭ್ರವಾಗಿ ಪರಿಮಳ ಸೂಸುತ್ತಿದ್ದರು. ನಾವಿಬ್ಬರೂ ಒಬ್ಬರಿಗೊಬ್ಬರು ಅಪರಿಚಿತರೇ ಆದರೂ ಮುಗುಳ್ನಕ್ಕು "ಬರ್ರಿ ಒಳಗ ಕೂಡ್ರಿ. ಸ್ನಾನ ಮಾಡ್ತಾ ಇದ್ದಾರ" ಎಂದು ಹೇಳಿ ನನ್ನ ಮುಂದೆ ಅಂದಿನ ಪೇಪರ ಇಟ್ಟು ಹೋದರು. ಡ್ರಾಯಿಂಗ್ ರೂಮಿನ ಅಂದ-ಚೆಂದ ನೋಡುತ್ತ ಪೇಪರಿನ ಮೇಲೆ ಕಣ್ಣಾಡಿಸುತ್ತ, ನನ್ನ ಭಯವನ್ನು ಕಡಿಮೆ ಮಾಡಿಕೊಂಡೆ. ವಕೀಲರು ಹೊರಗೆ ಬಂದು ಮಾತನಾಡಿಸಿದಾಗ ಆತ್ಮ-ವಿಶ್ವಾಸದಿಂದ ನಿರ್ಭಯವಾಗಿ ಮಾತನಾಡಿದೆ. ನಾಳೆಯಿಂದ ತಮ್ಮ ಆಫೀಸಿಗೆ ಬರಲು ಹೇಳಿದರು. ನಮಸ್ಕಾರ ಮಾಡಿ ಏಳುತ್ತಿದ್ದೆ. ತಡೆಯಿರಿ ಎನ್ನು-ವಂತೆ ಕೈಮಾಡಿ "ಸಿರೀ ಇಬ್ಬರಿಗೂ ಚಹಾ-ತಿಂಡಿ" ಎಂದರು. "ಬರ್ರಿ ಒಳಗ ತಯಾರ ಅದ" ಎಂದು ಉತ್ತರ ಬಂದಿತು. ಒಳಗೆ ಹೋದೊಡನೆ ಇಬ್ಬರಿಗೂ ಪರಿಚಯ ಮಾಡಿಕೊಟ್ಟರು. ಡೈನಿಂಗ್ ಟೇಬಲ್ಲಿನ ಮೇಲಿನ ಪ್ಲೇಟು ನೋಡಿ ಗಾಬರಿಯಾದೆ. ನನ್ನ ಉಪಹಾರ ಅದೇ ಮುಗಿದಿದೆ ಎಂದು ಹೇಳಿದಾಗ "ನಿಮ್ಮಂಥ ಹರೇದವರು ತಿನಲಿಕ್ಕೆ ಅನುಮಾನ ಮಾಡ-ಬಾರದು, ಕೊಟ್ಟಿದ್ದೆಲ್ಲಾ ತಿಂದು ದಕ್ಕಿಸಿಕೊಳ್ಳುವಷ್ಟು ತಾಕತ್ತು ಇರಬೇಕು ನಿಮಗ" ಎಂದು ದೊಡ್ಡ ದನಿಯಲ್ಲಿ ವಕೀಲರು ಗದರಿಸಿದರು. ಶ್ರೀದೇವಿ-ಯಮ್ಮ ನಗುತ್ತ, "ನಿಮಗ ಏನು ಬೇಕೋ ಅಷ್ಟ ತೊಗೊಳ್ರಿ. ಬ್ಯಾಡಾದ್ದು

ಬಿಟ್ಟುಬಿಡ್ರಿ. ಆದರ ಈ ಸಿಹಿ ಮಾತ್ರ ನೀವು ತಿನಲಿಕ್ಕೇ ಬೇಕು. ನಮ್ಮ ಮನೆಗೆ ಮೊದಲನೆ ಸಾರೆ ಬಂದೀರಿ. ವಕೀಲರ ಹತ್ತರ ಕೆಲಸಾ ಮಾಡವರೂ ಅಂದರ ನಮಗ ಮನೀ ಮಕ್ಕಳು ಇದ್ದಾಂಗ. ಸಂಕೋಚ ಮಾಡಕೊಬ್ಯಾಡ್ರಿ. ನಿಮ್ಮದ ಮನೀ ಅದ" ಎಂದು ಪ್ರೀತಿಯಿಂದ ಹೇಳಿದಾಗ ಮೈಮರೆತು ಪ್ಲೇಟಿನಲ್ಲಿ ಇದ್ದದ್ದೆಲ್ಲಾ ಮುಗಿಸಿಬಿಟ್ಟಿದ್ದೆ. ನನ್ನ ಖಾಲೀ ಪ್ಲೇಟು ನೋಡಿ ವಕೀಲರು ಹಾಸ್ಯಮಾಡಿದ್ದರು. "ಸಿರೀ, ವಕೀಲ ನಾ ಆಗೂದಕಿಂತ ನೀನು ಆಗಬೇಕಾ-ಗಿತ್ತು. ನಿನ್ನ ಮಾತಿನಿಂದ ಅರುಣನ ಮ್ಯಾಲೆ ಎಷ್ಟು ಪ್ರಭಾವ ಬಿತ್ತು ನೋಡು" ಎಂದು. ಅಂದಿನಿಂದ ಉಮಾಪತಿರಾಯರ ಮನೆ ನನಗೆ ಅಮ್ಮನ ಮನೆಯೇ ಆಯಿತು.

ಅವರ ಮನೆಯಿಂದ ತಿರುಗಿ ಬಂದ ಮೇಲೆ ಮನೆಯಲ್ಲಿ ಅವ್ವನ ಹತ್ತಿರ ಅಲ್ಲಿ ನಡೆದ ವಿಷಯವನ್ನೆಲ್ಲ ಹೇಳಿದೆ. ಶ್ರೀದೇವಿಯವರ ಮಾತು ಬಂದಾಗ ಅವ್ವ ಸುಮ್ಮನಾಗಿದ್ದಳು. ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ. ನನಗೆ ಇದೇನೋ ಆಶ್ಚರ್ಯವಾಗಿ ಕಂಡಿತು. ವಕೀಲರ ಹೆಂಡತಿಯನ್ನು ನಾನು ಹೊಗಳಿದ್ದು ಅವ್ವನ ಮನಸ್ಸಿಗೆ ಬರಲಿಲ್ಲವೇ ? ಯಾಕೆ ಸುಮ್ಮನಾದಳು ? ಎಲ್ಲರ ಹಾಗೆ ನನ್ನ ಅವ್ವನಿಗೂ ಇನ್ನೊಂದು ಹೆಣ್ಣಿನ ಹೊಗಳಿಕೆ ಕೇಳಿ ಹೊಟ್ಟೆ ಕಿಚ್ಚೇ ? ಸಂಶಯದಿಂದ ಮನಸ್ಸು ಬೇಕುಬೇಕಾದಂತೆ ವಿಚಾರ ಮಾಡಿತು. ಕೊನೆಗೊಂದು ದಿನ ಧೈರ್ಯಮಾಡಿ ಅವ್ವನನ್ನು ಒಬ್ಬಳೇ ಇದ್ದಾಗ ಕೇಳಿಯೇಬಿಟ್ಟೆ.

"ಅರುಣ, ನೀ ತಿಳಕೊಂಡ ಹಾಂಗ ಶ್ರೀದೇವಿ ಅವರ ಹೆಂಡತಿ ಅಲ್ಲ. ಉಮಾಪತಿರಾಯರ ಹೆಂಡತಿ ತೀರಿಕೊಂಡಾಳ. ಆಕೀ ಮಗಳು ಶಶಿಕಲಾ. ಈ ಶ್ರೀದೇವಿ ವಕೀಲರು ಇಟ್ಟುಕೊಂಡ ಹೆಣ್ಣು. ನೀ ಅವರ ಜೋಡಿ ಕೆಲಸಾ ಮಾಡತೀ ಅಂದಮ್ಯಾಲೆ ಎಲ್ಲಾ ವಿಷಯ ನಿನಗೂ ತಿಳಿದಿರಬೇಕು. ಅಂತ ಹೇಳಿದೆ". ಅಷ್ಟು ಹೇಳಿ ಅವ್ವ ತನ್ನ ಕೆಲಸಕ್ಕೆ ಹೋಗಿ ಬಿಟ್ಟಿದ್ದಳು, ಮುಂದೆ ಮಾತಾಡುವುದೇ ಅಪಚಾರ ಎನ್ನುವಂತೆ. ನಾನು ಕೇಳಿದ ವಿಷಯ-ವನ್ನು ನಂಬದವನಂತೆ ಮತ್ತೆ ಮತ್ತೆ ಅದನ್ನೇ ಮೆಲುಕು ಹಾಕುತ್ತ ಕುಳಿತು ಬಿಟ್ಟಿದ್ದೆ.

ಕೆಲಸ ಹೆಚ್ಚಾದಂತೆ ನಾನು ವಕೀಲರ ಜೊತೆ ಮಾತಾಡಲು ದಿನವೂ ಅವರ ಮನೆಗೆ ಹೋಗಬೇಕಾಗುತ್ತಿತ್ತು. ಎಷ್ಟೋಸಲ ಅವರ ಮನೆಯಲ್ಲಿ ತಿಂಡಿ–ಊಟಗಳ ಉಪಚಾರವೂ ನಡೆಯುತ್ತಿತ್ತು. ಆಗೆಲ್ಲಾ ಶ್ರೀದೇವಿಯವರನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದೆ. ಅವರ ನಯ, ವಿನಯ, ಸೌಜನ್ಯ, ಹಿತವಾದ ಮಾತು, ವಾತ್ಸಲ್ಯಪೂರ್ಣ ಉಪಚಾರ ಎಲ್ಲವೂ ಅತ್ಯುತ್ತಮ ಗೃಹಿಣಿಯ ಲಕ್ಷಣಗಳನ್ನೇ ಎತ್ತಿತೋರಿಸುತ್ತಿದ್ದವು. ಇವಳು ನೀತಿವಂತೆ-ಯಲ್ಲದ, ಚಂಚಲ ಮನಸ್ಸಿನ ಹೆಣ್ಣು ಎನ್ನುವ ಭಾವನೆ ಕನಸು ಮನಸಿ-ನಲ್ಲಿಯೂ ಬರಲಿಲ್ಲ. ವಕೀಲರಂತೂ ಕೂತರೆ ಸಿರಿ, ನಿಂತರೆ ಸಿರಿ, ಸಿರಿ ಇಲ್ಲದೆ ಅವರ ಎದೆಯ ಏರಿಳಿತವೂ ಇಲ್ಲ, ಉಸಿರಾಟವೂ ಇಲ್ಲ, ರೆಪ್ಪೆಯ ಬಡಿತವೂ ಇಲ್ಲ ಎನ್ನುವಂತೆ ನಡೆದುಕೊಳ್ಳುತ್ತಿದ್ದರು. ಒಮ್ಮೆ ಜ್ವರದಿಂದ ವಕೀಲರು ಹಾಸಿಗೆ ಹಿಡಿದಾಗ ಶ್ರೀದೇವಿ ಅವರಿಗೆ ಆರೈಕೆ ಮಾಡಿದ್ದು ನೋಡಿ ನನ್ನ ಮನಸ್ಸಿನ ಮೂಲೆಯಲ್ಲಿದ್ದ ಅಲ್ಪಸ್ವಲ್ಪ ಹೊಲಸನ್ನೂ ತೊಳೆದುಹಾಕಿದೆ. ಹೊರಗೆ ಬಂದು ಇತರರೊಡನೆ ಹೆಚ್ಚಾಗಿ ಬೆರೆಯಲು ಇಷ್ಟಪಡದೆ ಸದಾ ಮನೆಯಲ್ಲೇ ಕಾಲ ಕಳೆಯಬಯಸುವ ಅಮ್ಮನಿಗೆ ನಾನು ಮಗನಾದೆ. ನನ್ನ ತಾಯಿಯಷ್ಟೆ ಗೌರವ ಅವರಿಗೂ ಕೊಡುತ್ತಾ ಬಂದೆ.

ಉಮಾಪತಿರಾಯರು ಸಾಯುವ ಮೊದಲು ಬರೆದಿದ್ದ ವಿಲ್‌ನಲ್ಲಿ ಅಮ್ಮ ಇರುವವರೆಗೆ ಆ ಮನೆ ಅವರಿಗೆ, ಆಮೇಲೆ ಶಶಿಕಲೆಗೆ–ಬ್ಯಾಂಕಿನಲ್ಲಿ ಇಪತ್ತು ಸಾವಿರ ರೂಪಾಯಿ ಇಟ್ಟು ಅದರಿಂದ ಬರುವ ಬಡ್ಡಿಯಿಂದ ಅಮ್ಮನ ಉಪಜೀವನ ನಡೆಯಬೇಕು—ಅದರ ತರುವಾಯ ಅದೂ ಶಶಿಕಲೆಗೆ ಸೇರ-ಬೇಕು. ಎಂದು ಬರೆದಿದ್ದರು. ಅದಕ್ಕೆ ಸಾಕ್ಷಿಯಾಗಿ ಸಹಿ ಹಾಕಿದ್ದ ನನ್ನ ಮುಂದೆ ಉಮಾಪತಿರಾಯರು ತಮ್ಮ ಮನಸ್ಸು ಬಿಚ್ಚಿದ್ದರು.

"ನಾನು ಹೋದಮೇಲೆ ಸಿರಿ ಎಷ್ಟು ವರ್ಷ ಬದುಕಿರುತ್ತಾಳೋ ಏನೋ. ಮುಪ್ಪಿನ ಕಾಲದಲ್ಲಿ ಅವಳನ್ನು ನೋಡಿಕೊಳ್ಳಲು ಯಾರೂ ಇಲ್ಲದಂತಾಯಿತು. ಶಶಿಯನ್ನು ಬಿಟ್ಟರೆ ತನಗೆ ಬೇರೆ ಮಕ್ಕಳೇ ಬೇಡ ಎಂದು ಬಿಟ್ಟಳು. ದೊಡ್ಡವಳಾದಂತೆ ಶಶಿಯೂ ಅವಳನ್ನು ದೂರವಿಡುತ್ತ ಬಂದಳು. ಹೋಗಲಿ, ಶಶಿ ಈಗ ಗಂಡನ ಮನೆಯಲ್ಲಿ ಸುಖವಾಗಿದ್ದಾಳೆ.

ಎಲ್ಲ ಆಸ್ತಿಯನ್ನು ನಿನ್ನ ಹೆಸರಿಗೆ ಬರೆಯುತ್ತೇನೆ. ನಿನ್ನನ್ನು ಜೋಪಾನ-ಮಾಡುವವರಿಗೆ ನೀನೇ ಕೊಟ್ಟುಬಿಡು ಅಥವಾ ದತ್ತಕ ತೆಗೆದುಕೋ ಎಂದರೆ ಅದಕ್ಕೂ ಒಪ್ಪಲಿಲ್ಲ. ಹಟಮಾಡಿ ಎಲ್ಲವನ್ನು ನನ್ನಿಂದಲೇ ಶಶಿಗೆ ಬರೆಸಿ ಬಿಟ್ಟಳು. ಅವಳು ಬದುಕಿನಲ್ಲಿ ನನಗೆ ಕೊಟ್ಟಿದ್ದಕ್ಕೆ ಲೆಕ್ಕವೇ ಇಲ್ಲ. ಆದರೆ ಮಾತ್ರ ಏನೂ ತೆಗೆದುಕೊಳ್ಳಲಿಲ್ಲ" ಎಂದು ಹೇಳಿ ಅಷ್ಟು ಗಂಡೆದೆಯ ವಕೀಲರು ಮಕ್ಕಳಂತೆ ಕಣ್ಣೀರು ಹಾಕಿದರು.

ವಕೀಲರು ತೀರಿಕೊಂಡ ಮೇಲೆ ನನ್ನ ಕೆಲಸ ಹೆಚ್ಚಾದರೂ ಅದರಲ್ಲೇ ಬಿಡುವು ಮಾಡಿಕೊಂಡು ದಿನಕ್ಕೊಮ್ಮೆಯಾದರೂ ಅಮ್ಮನನ್ನು ಭೆಟ್ಟಿಯಾಗಿ ಬರುತ್ತಿದ್ದೆ. ತಂದೆಯ ಸಾವಿನ ಸುದ್ದಿ ಕೇಳಿ ಬಂದ ಶಶಿಕಲೆ ಗಂಡ ದಿಲ್ಲಿಗೆ ಹೋದಮೇಲೆಯೂ ತಿಂಗಳೊಪ್ಪತ್ತು ಇಲ್ಲಿಯೇ ನಿಂತಿದ್ದಳು. ಈ ನಡುವೆ ರಜೆಗೆ ಬಂದಾಗ ಆಗಾಗ ಅವಳನ್ನು ನೋಡುತ್ತಿದ್ದರೂ ಅವಳ ಸ್ವಭಾವ ಪರಿ-ಚಯ ನನಗೆ ಸರಿಯಾಗಿ ಆಗಿರಲಿಲ್ಲ. ಪಾಪ, ಅಮ್ಮ ನಾಲ್ಕು ದಿನಕ್ಕೇ ಹತ್ತು ವರ್ಷ ಹೆಚ್ಚಾದವರ ಹಾಗೆ ಕಾಣುತ್ತಿದ್ದರು. ಅವರ ದುಃಖ ತಿಳಿದ ನನಗೆ ಶಶಿಕಲೆ ತಾಯಿಯ ಮನಸ್ಸಿಗೆ ಸಮಾಧಾನ ಕೊಟ್ಟಾಳು ಎಂದು ಭಾವಿಸಿದ್ದೆ. ಒಂದು ದಿನ ಅಮ್ಮ,

"ಅರುಣ, ನನಗೊಂದು ವಿಚಾರ ಬಂದದ. ಶಶಿಕಲಾ ತಿರುಗಿ ಊರಿಗೆ ಹೋದಮ್ಯಾಲೆ ಇಲ್ಲೇ ನಾ ಒಬ್ಬಾಕಿನೇ ಇರುವಾಕಿ, ಮಂಚ, ಡ್ರೆಸಿಂಗ್ ಟೇಬಲ್, ಡೈನಿಂಗ್ ಟೇಬಲ್, ಸೋಫಾಸೆಟ್ಟು, ರೇಡಿಯೊಗ್ರಾಮ್ ಇವೆಲ್ಲಾ ಯಾತಕ್ಕ ಬೇಕು ? ಕೊಳ್ಳುವವರು ಯಾರರೆ ಸಿಗತಾರೇನು ನೋಡು. ಮಾರಿಸಿ ಕೊಟ್ಟುಬಿಡು" ಅಂದರು.

ಅವರ ಮಾತು ಮುಗಿಯುತ್ತಲೇ ಶಶಿಕಲೆ ಅವಸರದಿಂದ,ಮ. "ಅರುಣ, ನಮ್ಮ ತಂದೆಯವರ ಕಾನೂನು ಪುಸ್ತಕ ಅದಾವಲ್ಲಾ ಅವು ಇನ್ನ ಯಾರಿಗೆ ಉಪಯೋಗಕ್ಕ ಬರತಾವ ? ಅದಕ್ಕ ಅವನ್ನೂ ಯಾರರೆ ಕೊಳ್ಳತಾರೇನು ನೋಡಿ" ಎಂದು ಹೇಳಿದಾಗ ಈ ಶಶಿಕಲೆ ಎಂಥವಳು, ಇವಳ ಸ್ವಭಾವ ಎಂಥದು ಎನ್ನುವ ಕಲ್ಪನೆ ನನಗೆ ಸ್ಪಷ್ಟವಾಯಿತು. ಅದರ ಜೊತೆಗೆ ಅವಳೇ

ಇವನ್ನೆಲ್ಲ ಮಾರಿಸಿ ರೊಕ್ಕ ಕಟ್ಟಿಕೊಂಡು ಹೋಗಬೇಕೆಂದು ಉಪಾಯ ತೆಗೆದದ್ದೂ ಹೊಳೆಯಿತು.

ವಕೀಲರ ಕಾನೂನು ಪುಸ್ತಕಗಳನ್ನು ಮಾರದೆ ಲಾ ಕಾಲೇಜಿನ ಲೈಬ್ರರಿಗೆ ಕೊಟ್ಟರೆ ಅವರ ಹೆಸರು ಉಳಿಯುತ್ತದೆ. ಅಷ್ಟೊಂದು ಬೆಲೆಯುಳ್ಳ ಪುಸ್ತಕಗಳು ಎಲ್ಲರಿಗೂ ಸಿಗುವುದಿಲ್ಲ. ಹೊಸ ವಕೀಲರಿಗೆ ಅವುಗಳಿಂದ ಬಹಳ ಉಪಯೋಗವಾಗುತ್ತದೆ. ಉಮಾಪತಿರಾಯರ ಹೆಸರಿನ ವಿಂಗ್ ಒಂದನ್ನು ಮಾಡಿದರೆ ಒಳ್ಳೆಯದು ಎಂದು ನನ್ನ ಮನಸ್ಸಿನಲ್ಲಿದ್ದ ವಿಷಯವನ್ನು ಮಾರು-ದಿನ ಅಮ್ಮ ಒಬ್ಬರೇ ಇದ್ದಾಗ ಹೇಳಿಕೊಂಡೆ.

"ಒಟ್ಟು ಅಂದಾಜು ಈ ಪುಸ್ತಕಗಳ ಬೆಲೆ ಎಷ್ಟಾದೀತು ಅರುಣ" ಎಂದರು. ಅಮ್ಮ ಏನೋ ಯೋಚಿಸುತ್ತ,

"ಹತ್ತು ಸಾವಿರ ರೂಪಾಯಿ ಆದರೂ ಆಗಬಹುದು. ಆದರ ರೊಕ್ಕಾ ಕೊಟ್ಟರೂ ಇಂಥ ಪುಸ್ತಕ ಸಿಗೋದಿಲ್ಲ" ಅಂದೆ.

"ಹಾಂಗಾದರ ಮಾರೋದು ಬೇಡ. ಪುಸ್ತಕಾ ಲೈಬ್ರರಿಗೆ ಕೊಡಿಸಿಬಿಡು. ಅವರ ಹೆಸರು ಉಳೀಲಿ" ಅಂದರು. ಶಶಿಕಲೆಯನ್ನು ಒಂದು ಮಾತೂ ಕೇಳಲಿಲ್ಲ ಅಮ್ಮ ಎಂದು ನನಗೆ ಆಶ್ಚರ್ಯವಾಯಿತು. ಆದರೂ ಅದನ್ನು ಹೆಚ್ಚು ಹಚ್ಚಿಕೊಳ್ಳದೆ ಪುಸ್ತಕಗಳನ್ನು ಲೈಬ್ರರಿಗೆ ಸಾಗಿಸಿದೆ. ಆದರೆ ಅದರ ಹಿಂದೆ ನಡೆದ ಮಸಲತ್ತು ಎಷ್ಟೋ ದಿನಗಳ ಮೇಲೆ ನನಗೆ ಗೊತ್ತಾಯಿತು. ಅದೆಂದರೆ ಅಮ್ಮ ಶಶಿಕಲೆಗೆ ತಮ್ಮ ಹೆಸರಿನಲ್ಲಿ ಬ್ಯಾಂಕಿನಲ್ಲಿದ್ದ ಇಪ್ಪತ್ತು ಸಾವಿರದಲ್ಲಿ ಹತ್ತು ಸಾವಿರ ರೂಪಾಯಿ ಕೊಟ್ಟುಬಿಟ್ಟಿದ್ದರು. ಒಂದು ದೃಷ್ಟಿ-ಯಲ್ಲಿ ಪುಸ್ತಕಗಳನ್ನು ತಾವೇ ಕೊಂಡು ಕಾಣಿಕೆಯಾಗಿ ಕೊಟ್ಟಿದ್ದರು. ಶಶಿಕಲೆ ಹೋಗುವಾಗ ಮನೆಯಲ್ಲಿಯ ಬಂಗಾರ, ಬೆಳ್ಳಿ, ಎಲ್ಲ ಸಾಮಾನು ಮಾರಿಬಂದ ಹಣ ಎಲ್ಲವನ್ನೂ ಒಯ್ದಿದ್ದಳು. ಅಮ್ಮ ತಮಗೆ ಬೇಕಾದಷ್ಟೇ ಪಾತ್ರೆ, ವಕೀಲರು ಮಲಗುತ್ತಿದ್ದ ಮಂಚ, ಅವರು ಬರೆಯುತ್ತಿದ್ದ ಕುರ್ಚಿ, ಟೇಬಲ್ ಇಷ್ಟನ್ನೇ ಇಟ್ಟುಕೊಂಡಿದ್ದರು. ಅವರ ಮೈಮೇಲಿದ್ದ ಬಂಗಾರವೆಂದರೆ ಈ ಉಂಗುರವೊಂದೇ...

ಹೊರಬಾಗಿಲ ಸಪ್ಪಳವಾಯಿತು. ನಾನು ಹೇಳಿ ಕಳಿಸಿದ್ದ ಜನರೆಲ್ಲ ಬಂದಿದ್ದರು. ಅಮ್ಮನಿಗೆ ಬೇಕಾದವರೆಲ್ಲ ಬಂದು ನೋಡಿಕೊಂಡು ಹೋದರು. ಶಶಿಕಲೆಯಿಂದ ಉತ್ತರ ರೂಪವಾಗಿ ತಾರು, ಫೋನು ಏನಾದರೂ ಬರುವ ಸಮಯ ಮೀರಿ ಹೋದ ಮೇಲೆ ಶವ ಎತ್ತಿದೆವು. ಸಂಸ್ಕಾರ ಮುಗಿಸಿ ತಿರುಗಿ ಅವರ ಮನೆಗೇ ಬಂದೆ. ಅವರು ಮಲಗಿದ್ದ ಜಾಗದಲ್ಲಿ ದೀಪ ಹಚ್ಚಿಟ್ಟೆ. ಯಾಕೋ ಮನೆಗೆ ಹೋಗುವ ಮನಸ್ಸಾಗದೆ ಬಾಬೂನನ್ನು ಮನೆಗೆ ಕಳಿಸಿ ನಾನು ಸುಮ್ಮನೆ ಅಲ್ಲಿಯೇ ಕುಳಿತಿದ್ದೆ.

ಉಮಾಪತಿರಾಯರು ಹೋದ ಮೇಲೆ ಅಮ್ಮ ಎರಡು ವರುಷ ಮಾತ್ರ ಬದುಕಿದ್ದರು, ಹಾಗೆ ನೋಡಿದರೆ ಸಾಯುವಂಥ ವಯಸ್ಸೂ ಅವರದಲ್ಲ. ಆದರೆ ತಮಗೆ ಗುಣವಾಗದ ಗಂಟಲು ಕ್ಯಾನ್ಸರ್ ರೋಗ ಸುರುವಾಗಿದೆ ಎಂದು ಗೊತ್ತಾದ ಮೇಲೆ ಬಹಳ ಸಮಾಧಾನದಿಂದ "ಅರುಣ, ಇನ್ನು ಭಾಳ ಅಂದರ ಕೆಲವು ತಿಂಗಳೋ, ದಿನಾನೋ ಇರ್ತೀನಿ. ಅವರು ಹೋದವ್ಯಾಲೆ ಇನ್ನೂ ಎಷ್ಟು ವರ್ಷ ಈ ಭಾರಾ ತಾಳಬೇಕಪ್ಪಾ ಅಂತಿದ್ದೆ. ಅಂತೂ ದೇವರು ನನ್ನ ಮೊರಿ ಕೇಳಿದಾ" ಅಂದಿದ್ದರು.

ಅಮ್ಮನಿಗೂ ನನಗೂ ಒಂದು ಅಪರೂಪವಾದ ಬಾಂಧವ್ಯ, ಆತ್ಮೀಯತೆ ಬೆಳೆದುಬಂದಮೇಲೆ ಒಂದು ದಿನ ನಾನೇ, ವಕೀಲರು ಅವರನ್ನು ಮದುವೆಯಾದದ್ದು ಯಾವಾಗ? ಹೇಗೆ? ಎಂದು ಕೇಳಿದೆ. ಅದಕ್ಕೆ ಅವರು ಕೊಟ್ಟ ಉತ್ತರವನ್ನು ಅವರ ಶಬ್ದಗಳಲ್ಲಿಯೇ ಮೂಡಿಸುತ್ತಿದ್ದೇನೆ:

"ನನ್ನ ಅಪ್ಪ ನನ್ನನ್ನು ಒಂದು ದೊಡ್ಡ ಶ್ರೀಮಂತ ಕುಟುಂಬಕ್ಕೆ ಕೊಟ್ಟಿದ್ದರು. ಹದಿನಾರು ವರ್ಷಕ್ಕೆ ಮದುವೆಯಾದೆ. ಮುಂದೆ ಎರಡೇ ವರುಷಗಳಲ್ಲಿ ವಿಧವೆಯೂ ಆದೆ. ನಾವು ಬಡವರು ಅಲ್ಲದಿದ್ದರೂ ಗಂಡನ ಮನೆಯವರು ಬಹಳ ಶ್ರೀಮಂತರಿದ್ದರು. ನನ್ನವರು ಮದುವೆಯಾದದ್ದು ನನ್ನ ಚೆಲುವು ನೋಡಿ ಎಂದು ನನಗೆ ತಿಳಿದಿತ್ತು. ಅವರೇ ಹೋದಮೇಲೆ ಆ ಮನೆಯಲ್ಲಿ ನಾನು ಯಾರಿಗೂ ಬೇಡದ ವಸ್ತುವಾದೆ. ಅತ್ತೆ, ಮಾವ, ಭಾವ–ಮೈದುನರಿಂದ ತುಂಬಿದ ಮನೆಯಲ್ಲಿ ನನ್ನ ಪಾಡು ನಾಯಿಪಾಡಾಯಿತು. ಎಲ್ಲರಿಂದಲೂ ತಿರಸ್ಕಾರ, ಅಪಮಾನ ಸಹಿಸಿದೆ. ಭಾವ–ಮೈದುನರು

ನನ್ನ ಬಗ್ಗೆ ಸ್ವಲ್ಪ ಆಸಕ್ತಿ ತೋರಿಸಿದರೂ ಸಾಕು, ಓರಗಿತ್ತಿಯರ ಕೊಂಕು ಮಾತು, ಬಯ್ಗುಳಿಂದ ಹಣ್ಣಾಗುತ್ತಿದ್ದೆ. ಪ್ರಕೃತಿಸಹಜ ಪ್ರಾಯ, ನನ್ನ ಸೌಂದರ್ಯ, ಬೇರೆಯವರಿಗೆ ಕಣ್ಣು ಕಿಸುರಾದಾಗ ನನಗೆ ಜೀವವೇ ಬೇಡ ವಾಯಿತು. ಒಂದು ರಾತ್ರಿ ಬಾವಿಗೆ ಬೀಳಲು ಹೋದೆ, ಮೈದುನ ಯಾವಾಗ ಎಚ್ಚರವಾಗಿದ್ದನೋ ನನ್ನನ್ನು ಉಳಿಸಿದ. ಸರಿ, ಅವನಿಗೂ ನನಗೂ ಗಂಟು ಹಾಕಿ ಒದರಾಡಿ ಛೀಮಾರಿ ಹಾಕಿದರು ಮನೆಯ ಮಂದಿ. ಇದೆಲ್ಲ ನನ್ನ ಅಪ್ಪನ ಕಿವಿಗೆ ಬಿದ್ದಿತು. ನನ್ನ ಕಳ್ಳು ನನಗೆ ಭಾರವಲ್ಲ ಅಂತ ಅವರಿಗೆ ಹೇಳಿ ನನ್ನನ್ನು ಕರೆದುಕೊಂಡು ಬಂದ. ಆಗಿನ್ನೂ ನನಗೆ ಇಪ್ಪತ್ತು ವರುಷ. ಬರ-ಬರುತ್ತ ಅಪ್ಪ, ಅಣ್ಣನ ಮನಸ್ಸು ಬದಲಾಯಿತು. ಅವರಿವರ ಮಾತು ಕೇಳಿ ಬೀಗರ ಹತ್ತಿರ ಆಸ್ತಿಯಲ್ಲಿ ನನ್ನ ಪಾಲು ಕೇಳಿದ. ನಾನು ಬೇಡವೆಂದರೆ ಕೇಳಲಿಲ್ಲ. "ನಾ ಮಾಡೋದೆಲ್ಲಾ ನಿನ್ನ ಹಿತಕ್ಕ. ನೀ ಇನ್ನೂ ಸಣ್ಣಾಕಿ. ನಾವು ಹೋದವ್ಯಾಲೆ ನಿನ್ನ ಯಾರು ನೋಡಿಕೊಂಡಾರು? ಕಾಯ್ದೆ ಪ್ರಕಾರ ಅವರು ಆಸ್ತಿ ನಿನಗ ಕೊಡಲಿಕ್ಕೇ ಬೇಕು. ಆಮೇಲೆ ನೀನ್ಯಾ ದತ್ತಕ ಮಾಡಿಕೊಳೂವಂತೆ" ಎಂದು ನನಗೆ ಬೆಯ್ದು ಬುದ್ಧಿ ಹೇಳಿ ಒಪ್ಪಿಸಿದರು. ಬೀಗರ ಮೇಲೆ ಕೇಸು ಹಾಕೋದಕ್ಕೆ ಉಮಾಪತಿರಾಯರ್ನ ಹಿಡಿದರು. ನನಗೆ ಆಸ್ತಿಯಲ್ಲಿ ಪಾಲು ಸಿಗುವ ಭರವಸೆ ವಕೀಲರಿಂದ ಸಿಕ್ಕಾಗ, ಅಪ್ಪ, ಅಣ್ಣ, ಅತ್ತಿಗೆ ಉಪಚಾರ ಮಾಡಿದ್ದೇ ಮಾಡಿದ್ದು. ತೂಗು ಮಣೆಯಲ್ಲಿಟ್ಟು ತೂಗುವುದೊಂದೇ ಬಾಕಿ ಇತ್ತು. ಎಲ್ಲಾ ದುಡ್ಡಿನ ಮಹಿಮೆ. ಅಣ್ಣನ ಮಗನನ್ನು ನನಗೆ ದತ್ತಕ ಕೊಡುವ ಮಾತು ಗಟ್ಟಿಯಾಗಿತ್ತು. ಬೀಗರು ಸುಲಭವಾಗಿ ಪಾಲು ಕೊಡಲು ತಯಾರಿರಲಿಲ್ಲ. ಕೇಸು ನಡೆಯಿತು.

ಅದೇ ಮೊದಲನೆಯ ಸಲ ನಾನು ಅಪ್ಪನ ಜೊತೆಗೆ ವಕೀಲರ ಮನೆಗೆ ಬಂದಿದ್ದೆ. ನಾವೆಲ್ಲ ವರಾಂಡದಲ್ಲಿ ಕಾದು ಕುಳಿತಿದ್ದೆವು. ವಕೀಲರು ಇನ್ನೂ ಹೊರಗಿನ ಕೋಣೆಗೆ ಬಂದಿರಲಿಲ್ಲ. ಒಳಗೆ ಸಣ್ಣ ಹುಡುಗಿಯೊಬ್ಬಳು ಅಳುವುದೂ, ಚೀರುವುದೂ ಕೇಳುತ್ತಿತ್ತು. ಯಾರ್ಯಾರೋ ಸಮಾಧಾನ ಮಾಡುತ್ತಿದ್ದರು. ಆದರೂ ಹುಡುಗಿ ಒಂದೇಸಮನೆ "ಅವ್ವಾ" ಎಂದು ಅಳುತ್ತಲೇ ಇತ್ತು. ವಕೀಲರ ಹೆಂಡತಿ ತೀರಿಕೊಂಡಿದ್ದಾರೆ. ಮಗಳು

ಅನಾಥಳಾಗಿದ್ದಾಳೆ ಎನ್ನುವ ವಿಷಯ ನನಗೆ ತಿಳಿದಿತ್ತು. ಯಾಕೋ ನನ್ನ ಜೀವ ಹರಿಯಿತು. ಆ ತಬ್ಬಲಿ ಮಗು ಅಳುವುದು ಕೇಳಿ ಸಂಕಟವಾಯಿತು. ಅದನ್ನು ಎತ್ತಿಕೊಂಡು ರಮಿಸಬೇಕು ಎನ್ನುವ ಕನಿಕರ ಉಕ್ಕಿ ಅಪ್ಪನತ್ತ ನೋಡದೆ ದಿಗ್ಗನೆ ಎದ್ದು ಅವರ ಮನೆಯೊಳಕ್ಕೆ ಹೋಗಿಬಿಟ್ಟೆ. ಕೆಲಸದವಳು ಶಶಿಕಲೆಗೆ ಹಾಲು ಕುಡಿಸಲು ಹೋರಾಡುತ್ತಿದ್ದಳು. ಆದರೆ ಅವಳು ಮಾತ್ರ ಕೈಕಾಲು ಝಾಡಿಸಿ, ಹಾಲಿನ ಕಪ್ಪು ತಳ್ಳಿ. ಕಣ್ಣು ಮುಚ್ಚಿಕೊಂಡು ಚೀರು-ತ್ತಿದ್ದಳು. ನಾನು ಹೋಗಿ ಅವಳನ್ನು ಎತ್ತಿಕೊಂಡು ಎದೆಗೆ ಅವಚಿಕೊಂಡೆ. ಅವಳು ಕಣ್ಣು ತೆಗೆದು ನೋಡೋದಕ್ಕೆ ಪ್ರಯತ್ನ ಮಾಡಿದರೂ ನಾನು ಮುಖ ತೋರಿಸದೆ ಹಾಗೆಯೇ ತಬ್ಬಿಕೊಂಡು ಅವಳ ಬೆನ್ನು, ತಲೆ ಮೃದು-ವಾಗಿ ನೇವರಿಸುತ್ತಿದ್ದೆ. ಅತ್ತು-ಅತ್ತು ದಣಿದ ಶಶಿ ನನ್ನ ಹೆಗಲ ಮೇಲೆಯೇ ನಿದ್ದೆ ಮಾಡಿದಳು. ನಾವಿಬ್ಬರೂ ಹಾಗೆ ಕುಳಿತಿದ್ದಾಗ ಅವಳ ತಂದೆ ರೂಮಿನ ಬಾಗಿಲ ಹತ್ತಿರ ಬಂದು ನಿಂತರು. ನಾನು ಅದೇ ಮೊದಲಸಲ ಅವರನ್ನು ನೋಡಿದ್ದು.

ಅಂದಿನಿಂದ ನನ್ನ, ಶಶಿಕಲೆಯ ಪರಿಚಯ ಹೆಚ್ಚಾಗಿ, ನಾನೇ ಹಾಲು ಕುಡಿಸಬೇಕು, ಸ್ನಾನ ಮಾಡಿಸಬೇಕು, ತಲೆ ಬಾಚಬೇಕು ಎಂದು ಹಟ ಮಾಡ ತೊಡಗಿದಳು. ವಕೀಲರು ನಮ್ಮ ಕೇಸು ಹಿಡಿದಿದ್ದಾರೆ ಎನ್ನುವ ಕಾರಣದಿಂದ ಅವರ ಮನೆಗೆ ಹೋಗುವುದಕ್ಕೆ ಅಪ್ಪ ಬೇಡವೆನ್ನುತ್ತಿರಲಿಲ್ಲ. ದಿನವೂ ಭೆಟ್ಟಿ-ಯಾದರೂ ನಾನು, ವಕೀಲರು ಮಾತನಾಡಿದ್ದೇ ಬಹಳ ಕಡಿಮೆ. ಕಣ್ಣುಗಳು ಮಾತನಾಡುತ್ತಿದ್ದವು, ಮೌನ ನಮಗೆ ಪ್ರಿಯವಾಗಿತ್ತು. ಕಾಲ ಹೆಚ್ಚು ಹೆಚ್ಚಾಗಿ ಒಬ್ಬರನ್ನೊಬ್ಬರಿಗೆ ತಿಳಿಸಿ ಕೊಡುತ್ತಿತ್ತು. ನಾನು ಮಾಡುವುದು ಸರಿಯೋ, ತಪ್ಪೋ ಎಂದು ವಿವೇಚಿಸುವ ಪರಿಸ್ಥಿತಿಯಲ್ಲಿಯೂ ನಾನು ಇರಲಿಲ್ಲ. ಯಾಕೆಂದರೆ ನಾನು ನನಗೆ ತಿಳಿಯದೇ ಅವರನ್ನು ಪ್ರೀತಿಸುತ್ತಿದ್ದೆ.

ನಮ್ಮ ಕೇಸು ಇನ್ನೂ ನಡೆಯುತ್ತಲೇ ಇತ್ತು. ಶಶಿಕಲೆಗೆ ಜ್ವರ ಹೆಚ್ಚಾಗಿ ಡಾಕ್ಟರು ಟೈಫಾಯಿಡ್ ಎಂದಾಗ ಅವರು ಬಹಳ ಕಂಗಾಲಾಗಿದ್ದರು. ಅವತ್ತು ಅವರ ಮುಖ ನೋಡುವಹಾಗಿರಲಿಲ್ಲ. ಮನೆಯಲ್ಲಿ ರಾತ್ರಿ ಅವಳನ್ನು ನೋಡಿಕೊಳ್ಳುತ್ತೇನೆಂದು ಅಪ್ಪನಿಗೆ ಹೇಳಿ ಅವತ್ತು ಅಲ್ಲಿಯೇ

ಉಳಿದೆ. ಆಸ್ತಿ ತೆಗೆದುಕೊಂಡು ಮಗನನ್ನು ದತ್ತಕ ಕೊಡುವ ಕನಸು ಕಾಣುತ್ತಿದ್ದ ಅಣ್ಣ–ಅತ್ತಿಗೆಯರೂ ನನ್ನನ್ನು ಆಕ್ಷೇಪಿಸಲಿಲ್ಲ. ರಾತ್ರಿ ಹೆಚ್ಚಾ-ದಂತೆ ಜ್ವರ ಏರಿ ಶಶಿ ಬಾಯಿಗೆ ಬಂದಂತೆ ಬಡಬಡಿಸುತ್ತಿದ್ದಳು. ತಾನು ಆಗಾಗ ಜ್ವರ ಅಳೆಯುತ್ತ, ಬಾಯಾರಿಕೆ ಅಂದಾಗ ಗ್ಲೂಕೋಸ್ ನೀರು ಕುಡಿಸುತ್ತ, ಹಣೆಯ ಮೇಲೆ ಯೂಡಿಕೋಲೋನ್‌ನಲ್ಲಿ ನೆನೆಸಿನ ಪಟ್ಟಿಹಾಕುತ್ತ ಬೆಳಗಿನವರೆಗೂ ಹಾಗೆಯೇ ಕೂತಿದ್ದೆ. ನಡುನಡುವೆ ಒಂದೆರಡು ಸಲ ವಕೀಲರು ಎದ್ದು ಬಂದು ನೋಡಿಹೋಗಿದ್ದರು. ಅವರಿಗೂ ನಿದ್ದೆ ಬಂದಿರಲಿಲ್ಲ. ಬೆಳಿಗ್ಗೆ ಅವಳ ಜ್ವರ ಇಳಿಯುತ್ತ ಬಂದಾಗ ನಾನು ಕೂತಲ್ಲಿಯೇ ಕಣ್ಣು ಮುಚ್ಚಿದೆ. ಎಚ್ಚರವಾದಾಗ ವಕೀಲರ ರಗ್ಗು ನನ್ನ ಮೈಮೇಲಿತ್ತು. ಆವರ ಕೈ ಮೃದುವಾಗಿ ನನ್ನ ಹಣೆಯ ಮೇಲೆ ಆಡುತ್ತಿತ್ತು. "ಸಿರಿ" ಎಂದರು. ಅವರ ಕಣ್ಣುಗಳಲ್ಲಿಯ ಮಿಂಚು ಅಪೂರ್ವವಾಗಿತ್ತು. ಅವರು ಏನು ಹೇಳ-ಬೇಕೆನ್ನುತ್ತಾರೆ ಎನ್ನುವುದು ಹೇಳದೆಯೆ ನನ್ನ ಹೃದಯಕ್ಕೆ ತಿಳಿದು-ಹೋಯಿತು. ಮೌನವಾಗಿ ಅವರ ಕೈಮೇಲೆ ನನ್ನ ಕೈ ಇಟ್ಟೆ. ಅಂದಿನಿಂದ ತಿರುಗಿ ನನ್ನ ತವರು ಮನೆಗೆ ಹೋಗಲಿಲ್ಲ. ಜನ ಬಾಯಿಗೆ ಬಂದಂತೆ ಆಡಿ-ಕೊಂಡರೂ, ವಕೀಲರು ನನ್ನ ಕೈಬಿಡದೆ ರಜಿಸ್ಟರ್ಡ್ ಮದುವೆ ಮಾಡಿ-ಕೊಳ್ಳೋಣ ಎಂದರೂ ನಾನೇ ಬೇಡವೆಂದೆ. ಸಮಾಜದ ದೃಷ್ಟಿಯಲ್ಲಿ ಹೇಗಿದ್ದರೂ ನಾನು ವಿಧವೆ, ಕಳಂಕಿನಿ. ಇಂಥ ಸಮಾಜಕ್ಕೆ ಸಮಜಾಯಿಸಿ ಕೊಡೋದು ನನಗೆ ಬೇಕಾಗಿಲ್ಲ. ನಾನು ಸಾಯುವವರೆಗೂ ನಿಮ್ಮ ಸಂಗಾತಿ. ಅಷ್ಟು ಸಾಕು ನನಗ ಅಂದೆ. ಕೇಸು ಮುಂದುವರಿಸುವುದು ಬೇಡವೆಂದೆ. ಅವರಿಗೂ ಇಷ್ಟವಿರಲಿಲ್ಲ. ಬಿಟ್ಟುಬಿಟ್ಟರು. ಆಸ್ತಿ ಕೈ ತಪ್ಪಿದ್ದಕ್ಕೆ ತವರಿನ ಬಳಗ ನನ್ನನ್ನು ತೂಗುಮಣೆಯಿಂದ ತಿಪ್ಪೆಗೆ ಚೆಲ್ಲಿದರು. ಅವರ ಪಾಲಿಗೆ ನಾನು ಸತ್ತು ಹೋದೆ. ಮಗಳನ್ನು ನೋಡಿಕೊಳ್ಳಲು ಬಂದವರಿಗೆ ದೊಡ್ಡ ಮಗುವನ್ನೂ ನೋಡಿಕೊಳ್ಳಬೇಕಾಯಿತು". ಇದು ಅಮ್ಮನ ಕತೆ.

ವಕೀಲರು ನಿಮ್ಮ ಹಟದಂತೆ ವಿಲ್ ಬರೆದ ದಿನ ಕಣ್ಣೀರು ಹಾಕಿದ್ದು ಅಮ್ಮನಿಗೆ ಹೇಳಿದೆ. ಅಮ್ಮನ ಕಣ್ಣು ತುಂಬಿ ಬಂದಿತ್ತು. "ಅವರು ನನಗೆ ಎಂದೂ ಬತ್ತಲಾರದ ಪ್ರೀತಿ ಕೊಟ್ಟರು ಅರುಣ, ಆ ಪ್ರೀತಿಯ ಗುರುತಾಗಿ

ಈ ಉಂಗುರಾ ಕೊಟ್ಟರು. ಇದಕ್ಕೂ ಹೆಚ್ಚಾಗಿ ಆಸ್ತಿ–ಪಾಸ್ತಿ ನನಗ ಒಂದೂ ಬೇಕಾಗಿದ್ದಿಲ್ಲ" ಅಂದಿದ್ದರು.

ಅಂತ್ಯಕ್ರಿಯೆಯ ಖರ್ಚು ನಾನೇ ವಹಿಸಿಕೊಂಡಿದ್ದೆ, ಅಮ್ಮನ ಉಂಗುರ ನನ್ನ ಜೇಬಿನಲ್ಲಿಯೇ ಇತ್ತು. ಎತ್ತಿ ಅಂಗೈಯಲ್ಲಿಟ್ಟುಕೊಂಡೆ. "ಅಮ್ಮ, ನಿಮ್ಮಿಬ್ಬರ ಪ್ರೀತಿಯ ಗುರುತಾಗಿ ಇದನ್ನು ನಾನೇ ಇಟ್ಟುಕೋತೇನೆ" ಎಂದು ಹೇಳಿದೆ. ದೀಪ ನಿಧಾನವಾಗಿ ಉರಿಯುತ್ತಿತ್ತು. ಎದ್ದು ಹೊರಬಂದು ಬಾಗಿಲಿಗೆ ಕೀಲಿ ಹಾಕಿದೆ.

* * *



# ಆಜನ್ಮ ಶಿಕ್ಷೆ

ಅವರ ಪರವಾಗಿ ವಾದಿಸಲು ಸರಕಾರದಿಂದಲೇ ನಿಯಮಿಸಲ್ಪಟ್ಟ ವಕೀಲನಾಗಿ ಅವಳನ್ನು ಮೊದಲು ಭೆಟ್ಟಿಯಾಗಲು ಹೋದೆ. ಅವಳಿದ್ದ ಜಾಗ ತೋರಿಸಿ ಕಾನ್‌ಸ್ಟೇಬಲ್ ಹೊರಗೆ ಹೋದ ಮೇಲೆ ಮಬ್ಬು ಬೆಳಕಿನಲ್ಲಿ ದಿಟ್ಟಿಸಿ ನೋಡಿದೆ. ಹಸಿರೋ, ಕೆಂಪೋ ಹೇಳಲು ಬಾರದಷ್ಟು ಬಣ್ಣ ಹೋಗಿ ಮಣ್ಣಾಗಿದ್ದ ಹರಕು ಸೀರೆ, ಎಣ್ಣೆ ಕಾಣದ ಕೆದರಿದ ತಲೆ, ಬಡಕಲಾಗಿದ್ದ ದೇಹ ಇಷ್ಟೇ ನನಗೆ ಕಂಡದ್ದು. ಲಾಕಪ್ಪಿನ ಒಂದು ಮೂಲೆಯಲ್ಲಿ ಮೊಣ-ಕಾಲು ಸಂದಿಯಲ್ಲಿ ತಲೆ ಹುದುಗಿಸಿ ಕುಳಿತವಳು ನಾನು ಬಂದದ್ದು ತಿಳಿದರೂ ಹೊರಳಿ ನೋಡಲಿಲ್ಲ. ಹೆತ್ತ ಕೂಸಿನ ಕೊಲೆಯ ಆಪಾದನೆ ಹೊತ್ತ ತಾಯಿ. ನನಗೆ ಅವಳ ಮುಖ ನೋಡುವ ತವಕ ಹೆಚ್ಚುತ್ತಿತ್ತು. ಇನ್ನೊಂದು ಹೆಜ್ಜೆ ಮುಂದಿಟ್ಟು 'ಜಾನವ್ವಾ' ಅಂದೆ. ನೀಳವಾದ ಮೂಗು, ದೊಡ್ಡ ದೊಡ್ಡ ಕಣ್ಣುಗಳು. ರಕ್ತ ಹೀನತೆಯಿಂದ ಬಿಳಿಚಿಕೊಂಡ ಮುಖ ಇತ್ತ ಹೊರಳಿತು. "ನಾನು ನಿನ್ನ ವಕೀಲ. ನಿನ್ನ ಪರವಾಗಿ ಕೋರ್ಟಿನ್ಯಾಗ ವಾದಿಸತೇನಿ" ಆಶ್ಚರ್ಯದಿಂದ ಕಣ್ಣುಗಳು ಇನ್ನೂ ದೊಡ್ಡವಾದವು. ಓs ಇವಳು ತಿಳದಾಕಿ ಅಲ್ಲ. ಕೂಲಿಯವಳು. ಇವಳಿಗೆ ಎಲ್ಲಾ ತಿಳಿಸಿ ಹೇಳಬೇಕು. "ನೋಡವ್ವಾ, ನೀನು ಬಡವಿ, ದಿಕ್ಕಿಲ್ಲದಾಕಿ. ಅದಕ್ಕs ಸರಕಾರದವರು ನಿನ್ನ ಸಲುವಾಗಿ ಕೋರ್ಟಿನೊಳಗ ಮಾತಾಡಲಿಕ್ಕೆ ನನ್ನ ಕಳಿಸ್ಯಾರ. ನೀನು ಹೇಳೂದೆಲ್ಲಾ ನನ್ನ ಮುಂದ ಅಂಜಿಕಿ ಇಲ್ಲದs ಹೇಳು".

"ನೀವು ವಕೀಲರು ? ಕೋರ್ಟಿನ್ಯಾಗ ಏನು ಮಾತಾಡತೀರಿ ?"

"ನಿನ್ನ ಕೇಸು ನಡಸತೀನಿ. ನೀನು ನಿರಪರಾಧಿ ಅಂತ ಸಿದ್ಧ ಮಾಡತೇನಿ. ನಿನಗ ಬಿಡುಗಡಿ ಆಗದಿದ್ದರೂ ಶಿಕ್ಷೆ ಕಡಿಮಿ ಆಗತದ ಅನ್ನೂ ಭರವಸೆ ಅದs ನನಗ".

ಉಹುಂ ಎಂದು ಅಡ್ಡಡ್ಡ ತಲೆ ಆಡಿಸಿದಳು. "ಸಾಧ್ಯ ಇಲ್ಲಾ".

"ಯಾಕ ? ಯಾಕ ಸಾಧ್ಯ ಇಲ್ಲಾ ?"

"ಯಾಕಂದ್ರ. ನಾನು ಖರೇನ ಖೂನಿ ಮಾಡೇನಿ. ನಾನು ಹೊಟ್ಟೀ ಹೊತ್ತು ಹಡದ ಕೂಸಿನ ಕುತಿಗಿ ಹಿಚಿಕಿ ಕೊಂದೇನಿ,ನಾ ನಿರಪರಾಧಿ ಅಲ್ಲಾs" ದನಿ ಹಸಿಯಾಗಿದ್ದರೂ ಕಣ್ಣುಗಳು ಒಣಗಿದ್ದವು. ಅತ್ತು ಅತ್ತು ಕಣ್ಣೀರು ಮುಗಿದಿರಬೇಕು ಅಥವಾ ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸಬೇಕೆನ್ನುವ ಭಂಡ ಧೈರ್ಯವಿರಬೇಕು.

"ಜಾನವ್ವಾs ನೀನು ಉಳಿದ ವಿಚಾರ ಎಲ್ಲಾ ಬಿಡು. ಖರೇನs ಏನು ನಡೀತು ಅನ್ನೂದು ನನ್ನ ಮುಂದ ಹೇಳು. ಸಾಧ್ಯ ಇದ್ದಷ್ಟು ಪ್ರಯತ್ನ ಮಾಡತೇನಿ".

"ರಾಯರs ನಿಮ್ಮ ಹೆಸರೇನೋ? ನೀವು ಯಾರೋ? ನನಗ ಗೊತ್ತಿಲ್ಲ. ನನ್ನಂಥಾಕೀಗೆ ಸಹಾಯ ಮಾಡಾಕ ಬಂದೀರಿ. ನೀವು ಪುಣ್ಯವಂತರು. ನಿಮಗ ಕೈ ಜೋಡಸತೇನಿ. ನನ್ನ ಪಾಡಿಗೆ ನನ್ನ ಬಿಟ್ಟ ಬಿಡ್ರಿ. ಕೂಸನ್ನ ಕೊಂದದ್ದಕ್ಕ ನನ್ನ ಜೀವಾ ತೊಗೊಂಡರೂ, ಶಿಕ್ಷಾ ಅನುಭೋಗಸಾಕ ತಯಾರ ಇದ್ದೀನಿ. ನಾ ಸತ್ತರ ಅಳೂವವರು ಯಾರು ?"

"ಯಾಕ ನಿನಗ ತಂದಿ–ತಾಯಿ, ಗಂಡ, ಬಂಧು–ಬಳಗ......?"

"ಇದ್ದರು ಒಂದು ಕಾಲಕ್ಕ. ಆದರ ಈಗ ಯಾರೂ ಇಲ್ಲಾ. ಮತ್ತ ಬದಕಬೇಕಂತ ಆಶಾನೂ ಇಲ್ಲಾ. ನಾನು ಸತ್ತು ಹೋದರ ಸುಖಾ ಅದ ನನಗ" ತಿರಸ್ಕಾರದಿಂದ ತನ್ನಲ್ಲೇ ನಕ್ಕಳು.

ಇವಳು ಒಳ್ಳೆಯ ಮನೆತನದ ವಿದ್ಯಾವಂತ ಯುವತಿಯಾಗಿದಿ ರಬೇಕು. ಮಾತು, ರೀತಿಯಿಂದ ಕೂಲಿಯುವಳಂತೆ ಕಾಣಿಸುವುದಿಲ್ಲಾ. ದುಃಸ್ಥಿತಿಯಲ್ಲಿದ್ದಾಳೆ. ಸಾಧ್ಯವಿದ್ದರೆ ಪಾರು ಮಾಡಬೇಕು. ಆದಕ್ಕಾಗಿ ಅವಳನ್ನು ಇನ್ನಷ್ಟು ತಿಳಿಯಬೇಕೆನ್ನುವ ಹಟ ಹೆಚ್ಚಿತು ನನಗೆ. "ನಾನು ಈಗ ಇಲ್ಲೆ ಒಳಗ ಬರೂ ಮುಂದ ಅಂಗಳದಾಗ ಒಬ್ಬ ಹುಡುಗನ್ನ ನೋಡಿದೆ. ಅಂವಾ ನಿನಗ ಏನಾಗಬೇಕು ?" ಎಂದೆ.

"ನನ್ನ ಮಗಾರೀs" ಒಣಗಿದ ಕಣ್ಣುಗಳಲ್ಲಿ ನೀರು ಚಿಮ್ಮಿತು. "ನನ್ನ ಹಿಡಿದು ಹಾಕಿದಾಗಿಂದ ಅಲ್ಲೇ ಕುಂತಾನ. ನಿನ್ನೆ ರಾತ್ರಿಯೆಲ್ಲಾ ಅಳತಿದ್ದಾ. ಪೋಲೀಸರು ಜಬರಿಸಿದಾಗ ಸುಮ್ಮನಾದ."

"ಒಂದು ಕೂಸನ್ನ ಕೊಂದದ್ದು ನಿನಗ ಸಾಕಾಗಿಲ್ಲೇನು ? ಅವನೂ ಸಾಯಲಿ ಅಂತಿಯೇನು ? ನೀ ಇಲ್ಲದs ಅಂಪಾ ಹ್ಯಾಂಗ ಬದುಕಬೇಕು ?"

"ಅಯ್ಯೋ" ಎಂದು ಸೆರಗು ಮುಸುಕು ಹಾಕಿ ಜಾನವ್ವ ಗೋಳಿಟ್ಟಳು. ಅವಳನ್ನು ಸ್ವಲ್ಪ ಹೊತ್ತು ಅಳಲು ಬಿಟ್ಟು ಮತ್ತೆ ಕೇಳಿದೆ—"ಈಗ ಹೇಳು, ಖರೇನs ನೀ ಯಾರು ? ಹುಡುಗನ ತಂದಿ ಯಾರು ? ಕೂಸನ್ನ ಯಾಕ ಕೊಂದಿ ?"

ಕ್ಲಬ್ಬಿನಲ್ಲಿ ಆ ರಾತ್ರಿ "ಮಿಸ್ಟರ್ ಪಾಟೀಲರ, ನೀವು ಇವತ್ತ ಕೋರ್ಟಿ-ನ್ಯಾಗ ಏನ ಅದ್ಭುತ ಮಾತಾಡಿದಿರಿ. ನನಗ ಭಾಳ ಸೇರಿತು. Really I appreciate it" ಎಂದರು ಮನೋಹರ, ಸಿಗರೇಟಿನ ಬೂದಿ ಕೊಡವುತ್ತ.

ಇಸ್ಪೀಟು ಪೀಸುತ್ತಿದ್ದ ನಾನು ಸುಂದರವಾದ ಸ್ಟೈಲ್ ಕೊಟ್ಟು 'Thanks' ಎಂದೆ. ಮನಸ್ಸಿನಲ್ಲಿ ನಿಜವಾಗಿಯೂ ನನಗೆ ಆನಂದವಾಗಿತ್ತು. ಕಾರಣ ಸರಕಾರಿ ವಕೀಲ ಮನೋಹರರೇ ಅಂದು ನನ್ನ ವಿರುದ್ಧ ವಾದಿಸಿ-ದ್ದರು. ಆದರೂ ನಾನೇ ಗೆದ್ದಿದ್ದೆ. ನನ್ನ ನಗು ವ್ಯಂಗ್ಯವಾಗಿ ತೋರಿತೋ ಅಥವಾ ಗುಟುಕರಿಸಿದ ವಿಸ್ಕಿಯ ಪರಿಣಾಮವೋ, ಮನೋಹರ ಆವೇಶ-ಭರಿತರಾಗಿ ಹೇಳಿದರು, "ಆದರ ಪಾಟೀಲರ, ಖರೇನs ಆ ಹೆಂಗಸಿಗೆ ಕನಿಷ್ಠ ಐದು ವರ್ಷ ಶಿಕ್ಷಾ ಆಗಬೇಕಾಗಿತ್ತು ಅಂತ ಅಭಿಪ್ರಾಯ ಅದ. ಯಾಕ ಅಂದರ..."

"ಮನೋಹರ, ಯಾಕ ಅನ್ನೋದು ನನಗ ಗೊತ್ತದ. ಅವಳು ಅನೀತಿ-ವಂತಳು, ವ್ಯಭಿಚಾರಿ, ಮತ್ತ ಹೆತ್ತ ಕೂಸನ್ನ ಕೊಂದು ನಿಮ್ಮ ದೃಷ್ಟಿಯೊಳಗ ರಾಕ್ಷಸಿ ಆಗಿದ್ದಳು".

"Correct. ಪಾಟೀಲರs ಸರಿಯಾಗಿ ಹೇಳಿದಿರಿ. ಇಂಥವರಿಂದ ನಮ್ಮ ಸಮಾಜ ಎಷ್ಟು ಹೀನಸ್ಥಿತೀಗೆ ಇಳೀಲಿಕ್ಕೆ ಹತ್ತೇದ ನೋಡ್ರಿ. ನಮ್ಮ ಭಾರತೀಯ ಸಂಸ್ಕೃತಿ ಎಂಥಾದ್ದು ! ನಮ್ಮ ಭಾರತೀಯ ನಾರಿ ತನ್ನ ನಯ, ವಿನಯ, ಲಜ್ಜೆಯಿಂದ ಎಲ್ಲಾರಿಗೂ ಆದರ್ಶ ಆಗಿರಬೇಕು. ಅದು ಬಿಟ್ಟು ಆ ಹೆಂಗಸು ಇಂಥಾ ಕೆಲಸಾ ಮಾಡಿಯೂ ಸ್ವಲ್ಪೂ ನಾಚಿಕೆ ಇಲ್ಲದ ತಲೆ ಎತ್ತಿ ನಿಂತು ಕೋರ್ಟಿನ್ಯಾಗ ಎಲ್ಲಾರ್ನೂ ಹ್ಯಾಂಗ ದಿಟ್ಟಿಸಿ ನೋಡುತ್ತಿದ್ದಳು.

ನನಗಂತೂ ಭಾಳ ಅಸಹ್ಯ ಆಯ್ತು. ಇಂಥವರಿಗೆ ಕಠಿಣ ಶಿಕ್ಷಾ ಆದರ ದಾರಿಗೆ ಬರತಾರ. ಇಲ್ಲಾಂದರ ನಮ್ಮ ಸಂಸ್ಕೃತಿಯು ಅಧಃಪತನ ನಮ್ಮ ಕಣ್ಣ ಮುಂದs ಆಗ್ತದ ನೋಡ್ತಿರ್ರಿ ನೀವೂ".

"ಇರಲಿ ಬಿಡ್ರಿ ಮನೋಹರ, ಮೊದಲ ಎಲಿ ಎತ್ತಿಕೊಳ್ರಿ. ಈಗ ಆಡೂದು ನಿಮ್ಮ ಸರದಿ ಅಲ್ಲಾs ಪಾಟೀಲರ. ಮುಂದ ಕೇಸು ಏನಾತು ? ಹೇಳ್ರಿಲ್ಲಾ ನಮಗೂ ನಿಮ್ಮ ಕಥಿ ಭಾಳ ಸ್ವಾರಸ್ಯ ಇರತಾವು?" ಪ್ರೊ. ಚಂದ್ರ ಕಾಂತ ನನಗೆ ಪ್ರೋತ್ಸಾಹ ಕೊಟ್ಟರು.

"ಪ್ರೊಫೆಸರರ, ಅದು ಕಥೀ ಅಲ್ಲರೀ ನಿಜವಾಗಿ ನಡೆದದ್ದು, ನೀವೇನು ಲೇಖಕರು ಅದನ್ನೇ ಕಥೀ, ಕಾದಂಬರಿ ಮಾಡಬಹುದು. ನಿಮಗ ಒಂದು ವಸ್ತೂನೂ ಸಿಕ್ಕ ಹಾಂಗ ಆಗ್ತದ, ಆದರ......"

"ಪಾಟೀಲರ ನೀವೂ ಭಾಷಣಾ ಸುರು ಮಾಡಿಬಿಟ್ರೆಲ್ಲಾ. ಮೊದಲು ನಿಮ್ಮ ಕೇಸಿನ ಸುದ್ದೀ ಹೇಳ್ರಿ. ನಾನು ಆ ಕೂಸಿನ ಪೋಸ್ಟಮಾರ್ಟಂ ಮಾಡಿದ್ದೆ. ಹೆತ್ತ ಇಪ್ಪತ್ನಾಲ್ಕು ತಾಸಿನೊಳಗ ಅದರ ಕುತಿಗಿ ಹಿಚಿಕಿ ಕೊಂದದ್ದು ಅದs ಹೌದಲ್ಲೋ ?" ಡಾ. ದೇಸಾಯಿ ನಡುವೇ ಬಾಯಿ ಹಾಕಿದರು, ಆಟವನ್ನು ಗೆದ್ದ ಸಂತೋಷದಲ್ಲಿ ರೊಕ್ಕ ತೆಗೆದು ಕಿಸೆಗೆ ಸೇರಿಸುತ್ತ.

"ಹಾಂ ಅದ, ಆಕಿ ವಿಧವಾ, ಯಾರೂ ದಿಕ್ಕಿಲ್ಲದಾಕಿ. ಬಡವಿ, ಯಾರಿಗೋ ಗರ್ಭಿಣಿ ಆದ್ಲು. ಮೊದಲಿನ ಗಂಡನಿಂದ ಒಂದು ಹುಡುಗ ಇತ್ತು".

"ನನಗ ಸಿಟ್ಟು ಬರೂದು ಅದಕ್ಕs ನೋಡ್ರಿ. ಮದುವಿ ಆದಾಕಿ, ಒಂದು ಮಗುವಿನ ತಾಯಿ ಇದ್ದೂ ವ್ಯಭಿಚಾರಕ್ಕೆ ಇಳದ್ಲು ಅಂತ"'

"ಆಕಿ ತನ್ನ ಮನಸಾ ವ್ಯಭಿಚಾರಕ್ಕ ಇಳೀಲಿಲ್ಲಾ ಮನೋಹರ, ನಾನು ಕೋರ್ಟಿನ್ಯಾಗ ಹೇಳಿದ್ನೆಲ್ಲಾ ನಿಜವಾಗಿ ಏನು ನಡೀತು ಅನ್ನೂದು."

"ಹೌದು ಹೌದು ಹೇಳಿದ್ರಿ, ಆಕಿ ಕತೀ ಕಟ್ಟಿ ಹೇಳಿದ್ಲು, ನೀವು ಅದನ್ನ ನಂಬಿ, ನಿಮ್ಮ ವಾಕ್ಚಾತುರ್ಯ ತೋರಿಸಿ ಎಲ್ಲರ ಮನಸ್ಸು ಕರಗೂ ಹಾಂಗ ಮಾಡಿದ್ರಿ. ನಾನು ಎಷ್ಟೇ ಜೋರಿನಿಂದ ಆಕೀಗೆ ಶಿಕ್ಷಾ ಆಗಬೇಕು ಅಂತ

ವಾದಿಸಿದ್ರೂ ಜಜ್ಜರ ಮನಸ್ಸು ತಿರುಗಿಸಿ ಬಿಟ್ರಿ". ಮನೋಹರ ಆವೇಶದಿಂದ ಕೆಂಪಾಗಿದ್ದರು.

"ಏನು ನಡೀತು ಅನ್ನೂದು ನಮಗೂ ಅಷ್ಟು ಹೇಳ್ರಿ ಅಂದರ, ಮತ್ತ ನೀವು ಇಬ್ಬರs ವಾದಿಸತೀರಿ. ಇದು ಕೋರ್ಟಲ್ಲಾ ಕ್ಲಬು ಅನ್ನೂದು ಮರತ ಬಿಟ್ಟೀರೇನು ?" ಚಂದ್ರಕಾಂತ ನಗುತ್ತಾ ಹೇಳಿದಾಗ ಕಾವೇರುತ್ತಿದ್ದ ವಾತಾ-ವರಣ ತಂಪಾಯಿತು.

"ಆಕಿ ತಾನು ಸ್ವತಾ ದುಡದು ಹೊಟ್ಟಿ ತುಂಬಿಸಿಕೋತಿದ್ಲು. ತನ್ನ ಜೋಡಿ ಮಗನ್ನೂ ಸಾಕಬೇಕಾಗಿತ್ತು. ಆದರ ಆಕೀಗೆ ಇರಲಿಕ್ಕೆ ಎಲ್ಲೂ ಆಸರ ಇದ್ದಿದ್ದಿಲ್ಲಾ. ಒಂದು ಬಿಲ್ಡಿಂಗ್ ಕಟ್ಟುತ್ತಿದ್ದರು. ಅಲ್ಲೆ ಆಕಿ ಇಟ್ಟಂಗಿ ಹೊರತಿದ್ಲು. ಅರ್ಧಾಮರ್ಧಾ ಕಟ್ಟಿದ ಬಿಲ್ಡಿಂಗಿನ ಮೂಲಿಯೊಳಗ ಜಾಗಾ ಮಾಡಿಕೊಂಡು ಮಗನ ಜೋಡಿ ಇರತಿದ್ಲು. ಕಪ್ಪಗಿದ್ದರೂ ಕಣ್ಣು ಮೂಗಿಲೆ ಚೆಲುವಿ".

"ವಯಸ್ಸು ?"

"ಇಪ್ಪತ್ತೆರಡು ವರ್ಷಾ ಅಂದ್ಲು, ಆಯ್ತು, ಒಬ್ಬಾಕೆ ಅದಾಳ ಅಂತ ಗೊತ್ತಾದ ಕೂಡಲೆ ಆ ಬಿಲ್ಡಿಂಗಿನ ಕೆಲಸಾ ಮಾಡಿಸೊ ಮೇಸ್ತ್ರಿ ಗಂಟುಬಿದ್ದಾ; ಬ್ಯಾಡಾ ಅಂತ ವಿರೋಧಿಸಿದರ ಕೆಲಸಾ, ಜಾಗಾ ಎರಡೂ ಬಿಡಸತೀನಿ ಅಂತ ಬೆದರಿಕಿ ಹಾಕಿದಾ. ಏನ ಮಾಡ್ತಾಳು? ಸುಮ್ಮನಾದ್ಲು, ಅದರ ಫಲಾ ಈಗ ಹುಟ್ಟಿದ ಕೂಸು. ಎರಡು ಜೀವಾ ಜ್ವಾಪಾನ ಮಾಡೂದು ಕಠಿಣ ಆಗಿತ್ತು. ಬಿಲ್ಡಿಂಗಿನ ಕೆಲಸಾನೂ ಮುಗಿದಿತ್ತು. ಹೊಟ್ಟೆಗೆ ಕೂಳು ಇದ್ದಿದ್ದಿಲ್ಲಾ. ಹೆತ್ತು, ಸಿಟ್ಟಿನಾಗ ಅದರ ಕುತ್ತಿಗಿ ಹಿಚಿಗಿ ಹಾಕಿದ್ಲು. ಪೋಲೀಸರ ಕೈಯಾಗ ಸಿಕ್ಕಿಬಿದ್ಲು".

"ಓ, ಹೌ Horrible! ಆದರ ವಿಚಾರ ಮಾಡಿದಾಗ ನನಗ ಅನಸ್ತದ ತಪ್ಪು ಎಲ್ಲಾ ಅವಳದs ಅಲ್ಲಾ ಅಂತ. ಇದರೊಳಗ ಮೇಸ್ತ್ರಿಗೇನೂ ಜವಾಬ್ದಾರಿ ಇಲ್ಲೇನು ?" ಚಂದ್ರಕಾಂತ ಕಳಕಳಿಯಿಂದ ಕೇಳಿದರು.

"ಅವನ್ನ ಹಿಡಿದು ಕೇಳುವವರು ಯಾರು ? ಅದನ್ನ ನಾನು ಕೋರ್ಟಿನ್ಯಾಗ ವಾದಿಸಿದೆ. ಅವಳ ಪರಿಸ್ಥಿತೀನ ಸರಿಯಾಗಿ ತಿಳಕೊಂಡೆ.

ಅವಳು ನಿರ್ದೋಷಿ ಅಂತ ಹೇಳಿದೆ. ಜಜ್ ಒಪ್ಪಿಕೊಂಡರು. ಆದರೂ ಸಮಾಜದಲ್ಲಿ ಕಟ್ಟು-ನಿಟ್ಟು, ನೀತಿ-ನಿಯಮ ಇರಬೇಕು ಅನ್ನುವ ಸಮಾಜ ಸ್ವಾಸ್ಥ್ಯದ ದೃಷ್ಟಿಯಿಂದ ಆಕೀಗೆ ಕೇವಲ ಮೂರು ತಿಂಗಳು ಸಾದಾ ಶಿಕ್ಷಾ ಕೊಡತೇನಿ, ಅಂತ ತೀರ್ಪು ಹೇಳಿದರು". ಇಸ್ಪೀಟ್, ಪ್ಯಾಕಿನಲ್ಲಿ ಸೇರಿಸುತ್ತಾ ಹೇಳಿದೆ.

"ಅಲ್ರೀ ಪಾಟೀಲರ, ಇಷ್ಟು ದೊಡ್ಡ ಊರೊಳಗ ಆಕೀಗೆ ಸಂಬಂಧಿಕರು ಯಾರೂ ಹ್ಯಾಂಗ ಇಲ್ಲಾ? ಆಶ್ಚರ್ಯ ಆಗೇದ ನನಗ. ತಂದಿ, ತಾಯಿ, ಗಂಡ ಇಲ್ಲದಿದ್ದರೂ ಅಕ್ಕ-ತಂಗಿ, ಅಣ್ಣ-ತಮ್ಮ, ಭಾವ, ಮೈದುನ, ದೂರದ ಬಳಗದವರಾದ್ರೂ ಇರಬೇಕಲ್ಲ" ಎಂದು ಚಂದ್ರಕಾಂತ ತಮ್ಮ ಅನುಮಾನ ವ್ಯಕ್ತಪಡಿಸಿದಾಗ ನಾನು ವಿವರವಾಗಿ ಅವಳ ಗತಇತಿಹಾಸ ಹೇಳಲೇಬೇಕಾಯಿತು.

"ನೀವು ಅನ್ನೂದು ಖರೇ ಅದ ಚಂದ್ರಕಾಂತ, ಹಾಂಗ ನೋಡಿದರ ಮನುಷ್ಯಾ ಎಂದೂ ಪೂರ್ತಿ ಅನಾಥ ಇರೂದಿಲ್ಲ. ರಕ್ತ-ಸಂಬಂಧಿಗಳು ಇಲ್ಲದಿದ್ದರೂ ಸ್ನೇಹಿತರು, ಹಿತೈಷಿಗಳು, ಪ್ರೇಮಿಸಿದವರಾದರೂ ಇದ್ದೇ ಇರತಾರ, ಅದರ ಈಕೀದೊಂದು ದೊಡ್ಡ ಟ್ರಾಜಡಿ......"

"ಅಬ್ಬಬ್ಬ! ಆಗಲೇ ಒಂಬತ್ತಾಯ್ತು. ನಾ ಇನ್ನು ಬರ್ತೀನಿ. Good-Night" ಎನ್ನುತ್ತ ಮನೋಹರ ಎದ್ದು ಹೊರಟೇ ಬಿಟ್ಟರು.

"ಆಗಲಿ ಹೋಗಿ ಬರ್ರಿ. ನಿಮಗ ಹೆಂಡತೀ, ಮಕ್ಕಳು ದಾರಿ ಕಾಯುತಿರತಾರ. ನನ್ನ ಹಾಂಗ ಏನು ಒಂಟಿಬಡಕರಲ್ಲ. ನನಗೇನು ಕ್ಲಬ್ಬು, ಮನೀ ಎರಡೂ ಒಂದೇ ಅಲ್ಲೇನ್ರಿ ಚಂದ್ರಕಾಂತ ?"

"ಹೌದ್ರೆಪಾ. ನಿಮ್ಮ ದೇಶಕ್ಕ ನೀವೇ ರಾಜಾ, ನೀವೇ ಪ್ರಜಾ. ನಮ್ಮ ಹಾಂಗ ಸ್ವಾತಂತ್ರ್ಯ ಮಾರಿಕೊಂಡಿಲ್ಲಲ್ಲಾ, ನೀವು ಸುಖಪುರುಷರು. ಯಾವ ಜವಾಬ್ದಾರೀನೂ ಇಲ್ಲದೇ ಜೀವನದ ಎಲ್ಲಾ ಕ್ಷಣಾನೂ ಪೂರ್ಣ ಸುಖಾ ಅನುಭವಿಸುವವರು". ಚಂದ್ರಕಾಂತ ತನ್ನ ರಸಿಕತೆಯನ್ನು ನೆನೆದು ನಗುತ್ತ ಹೇಳಿದರು.

"ಮನೋಹರ ಹೋದ್ರಲ್ಲ. ಇನ್ನ ನಿಮ್ಮ ಕಥೀ ಮುಂದುವರಸ್ರೀ ಪಾಟೀಲರ" ದೇಸಾಯಿ ಮತ್ತೆ ನೆನಪಿಸಿದರು. ನನ್ನ ನಗು ಅಡಗಿತು.

"ಜಾನಕಿ ಅಂತ ಆ ಹೆಂಗಸಿನ ಹೆಸರು. ಜಾನಕೀ ಅಪ್ಪ ಅಷ್ಟೇನೂ ಆಸ್ತಿವಂತರಲ್ಲ. ಇರಲಿಕ್ಕೆ ಒಂದು ಮನೀ ಇತ್ತು. ಒಂದು ಅಂಗಡೀಯೊಳಗ ಲೆಕ್ಕಾ ಬರಕೊಳ್ಳೂ ಕೆಲಸಾ ಮಾಡತಿದ್ದರು. ಅವರಿಗೆ ನಾಲ್ಕು ಮಂದಿ ಹೆಣ್ಮಕ್ಕಳು. ಜಾನಕೀನೇ ದೊಡ್ಡಾಕಿ. ಹೈಸ್ಕೂಲಿನ್ಯಾಗ ಕಲೀತಿದ್ದಳು. ಅಪ್ಪಗ ಬರೂ ಪಗಾರಕ್ಕ, ಹೊಟ್ಟೀ ಬಟ್ಟೆಗೆ ಚಾಟಿ ಆಗ್ತಿತ್ತು. ಸಂಸಾರ ಬೆಳದ್ಹಾಂಗ ಅದೂ ಸಾಲತಿದ್ದಿಲ್ಲ. ಯಾವಾಗಲೂ ಕೈಗಡ, ಕೈಸಾಲ ಅಂತ ಮೈ ತುಂಬ ಇರತಿತ್ತು. ಇವಳ ಜೋಡಿ ಸಾಲೀ ಕಲಿಯೂ ಹುಡುಗೇರ ಫ್ಯಾಷನ್ನಿನ ಅರಿವಿ, ರಿಬ್ಬನ್ನು, ಬಳೀ, ಸರಾ, ಹೂವು ಎಲ್ಲಾ ನೋಡಿ ಇವಳಿಗೂ ಆಸೆ ಆಗತಿತ್ತು. ಆದರ ಅವೆಲ್ಲಾ ಈಕೀಗೆ ಹ್ಯಾಂಗ ಸಿಗಬೇಕು ? ತಾನೂ ಅವರ ಹಾಂಗs ಶ್ರೀಮಂತ ಆಗಬೇಕು. ಕೈಯಾಗ ರೊಕ್ಕ ಇರ-ಬೇಕು. ಚಾಕಲೇಟು, ಕ್ಯಾಡ್‌ಬರೀಜ್ ಕೊಂಡು ತಿನ್ನಬೇಕು. ಛಂದನ್ನ ಅರವೀ ಹಾಕ್ಕೋಬೇಕು—ಅನ್ನೂ ಆಸೇ ದಿನದಿನಕ ಬೆಳಕೋತ ಹೋಯ್ತು. ಇದಕೆಲ್ಲಾ ಏನು ಉಪಾಯಾ ಅಂತ ವಿಚಾರ ಮಾಡತಿದ್ದಳು. ಬರೇ ವಿಚಾರಾ ಮಾಡದ ಮುಂದುವರಿದು ಅದನ್ನ ಕೃತಿಗೆ ಇಳಿಸಿದ್ದs ಆಕೀ ಜೀವನಾ ದುರಂತ ಆಗಲಿಕ್ಕೆ ಕಾರಣ ಆಯ್ತು".

"ಅಂದರ ಜಾನಕಿ ಕಳವು ಮಾಡಲಿಕ್ಕೆ ಸುರು ಮಾಡಿದ್ಲೇನು ?"

"ಇಲ್ರೀ, ಕಳವು ಮಾಡಿದ್ದರ ತಂದಿ-ತಾಯಿಗೆ ಗೊತ್ತಾದ ಮ್ಯಾಲೆ ಹೊಡದು ಬಡದು ಅದನ್ನ ಬಿಡಸತಿದ್ದರು. ಆದರ ಜೀವನದ ಪೂರ್ಣ ತಿಳಿವಳಿಕಿ ಇಲ್ಲದ ಹುಡುಗಿ, ಬರೇ ಹದಿನಾರು ವರ್ಷದಾಕಿ, ಮುಂದೇನಾ-ದೀತು ಅನ್ನೂ ವಿಚಾರ ಮಾಡದs ಆಸೇಕ ಬಲಿಯಾಗಿ ತನ್ನ ಶೀಲಾ ಕಳ-ಕೊಂಡಳು. ಇವರು ಕಿರಾಣಿ ಸಾಮಾನು ಉದ್ರೀ ತರೂ ಮಾಲಕರ ಮಂಗ, ಕಾಲೇಜು ಕಲಿಯೂ ಹುಡುಗ, ಈಕೀ ಸ್ವಭಾವ ತಿಳಕೊಂಡ, ಬಳಿ, ತಿನಸು, ಸಿನೆಮಾ ಅಂತ ಆಸೆ ತೋರಿಸಿ, ಸುಲಭವಾಗಿ ಅವಳ್ನ ಕೆಡಿಸಿಬಿಟ್ಟಾ. ತನಗೆ ಬೇಕಾದದ್ದೆಲ್ಲಾ ಸಿಕ್ಕಿದ್ದಕ್ಕ ಇವಳೂ ಒಪ್ಪಿಕೊಂಡಳು. ತನ್ನ ಅವನಿಗೆ

ಮಾರಿಕೊಂಡಳು. ಅದರ ಫಲಾ ಅವಳ ಹೊಟ್ಟಿಯೊಳಗ ಮೂಡಿದ ಕೂಡಲೇ ಅಂವಾ ಕೈ ಬಿಟ್ಟು ಜಾರಿಕೊಂಡ. ಮನ್ಯಾಗ ಗೊತ್ತಾತು. ತಮ್ಮ ಮರ್ಯಾದಿ ಉಳಿಸಿಕೊಳ್ಳಲಿಕ್ಕೆ ಗರ್ಭಪಾತ ಮಾಡಿಸಿದ್ರು. ಲಗೂನ ಈಕಿನ್ನ ಮನೆಯಿಂದ ಸಾಗಹಾಕಬೇಕಾಗಿತ್ತು. ಆಕಾಶ, ಪಾತಾಳ ಒಂದು ಮಾಡಿ ಎರಡನೇ ವರಾ ಹುಡುಕಿ ಲಗ್ನಾ ಮಾಡಿ ಗಂಡನ ಮನೀಗೆ ಅಟ್ಟಿದರು. ಕಳಸೂ ಮುಂದ ಇನ್ನೊಮ್ಮೆ ತವರ್ಮನಿಗೆ ಕಾಲು ಇಡಬಾರದು ಅಂತ ಬೆದರಿಕೆ ಹಾಕಿದರಂತ. ಈಕೀ ತಂಗಿಯರ ಲಗ್ನಾ ಆಗಬೇಕಾಗಿತ್ತಲ್ಲ ಇನ್ನೂ. ಗಂಡ ಅಷ್ಟೇನೂ ಸ್ಥಿತಿವಂತ ಅಲ್ಲಾ. ಯಾವದೋ ಫ್ಯಾಕ್ಟರಿ ಒಳಗ ಕೆಲಸಾ ಮಾಡತಿದ್ದಾ. ಈಕೀಗಿಂತ ದೊಡ್ಡವರು ಮಲಮಕ್ಕಳು ಇದ್ದರು. ಈಕೀಗೂ ಒಂದು ಹುಡುಗ ಹುಟ್ಟಿತು. ಗಂಡ ಸತ್ತ. ಮಲಮಕ್ಕಳು ತಮಗೇನೂ ಸಂಬಂಧ ಇಲ್ಲದವರಾಂಗ ಮನೀ ಬಿಟ್ಟು ಹೊರಗೆ ಹಾಕಿದರು. ದುಡಿದು ಹೊಟ್ಟೀ ತುಂಬಿಸಿಕೋಬೇಕು ಅಂತ ಈ ಊರಿಗೆ ಬಂದಳು. ಇಲ್ಲೆ ಈ ಪ್ರಕರಣ ಆತು. ನೋಡ್ರಿ ಈಗ ಆಕಿ ಅನಾಥಳು ಹೌದೋ ಅಲ್ಲೋ ? ನಮ್ಮ ವಕೀಲಿ ಕೆಲಸ-ದಾಗ ಎಷ್ಟೋ ಜನರನ್ನು ನೋಡ್ತೇವಿ. ಆದರ ಇಂಥಾ ದುರ್ದೈವೀನ ನಾ ನೋಡಿದ್ದಿಲ್ಲಾ".

"ರಕ್ತ ಸಂಬಂಧಿಗಳು ಇದ್ದೂ ಇಲ್ಲಾದರು. ಪ್ರೇಮಿಗಳು ಕೈ ಬಿಟ್ಟರು. ಇನ್ನ ಆಕೀಗೆ ಆಸರ ಅಂದರ ಆ ಹುಡುಗ ಒಂದs" ಚಂದ್ರಕಾಂತ ವಿಷಾದದಿಂದ ನುಡಿದರು.

"ಆ ಹುಡುಗಾ ಆಸರ ಅಲ್ಲಾರೀ, ಭಾರ ಅನ್ನರಿ ಭಾರ. ಹಾಂ ಅಂದ್ಹಾಂಗ ಆ ಹುಡುಗ ಎಲ್ಲೆ ಅದಾನ ಈಗ ?" ಡಾಕ್ಟರರು ಸಹಾನುಭೂತಿ ಯಿಂದ ಕೇಳಿದರು.

"ಇವತ್ತs ನಾ ಅವನ್ನ ಕರಕೊಂಡು ಹೋಗಿ ಪ್ರಾಥಮಿಕ ಶಾಲೆಗೆ ಸೇರಿಸಿ ಬಂದೆ ,ತಾಯಿ ಜೇಲಿಂದ ಬರೂತನಕಾ ಅಂವಾ ಎಲ್ಲಿರಬೇಕು? ಭಾಳ ಅಳತಿದ್ದಾ. ಸ್ವಲ್ಪ ಸರಿಯಾಗಿ ಕಾಳಜಿ ತೊಗೊಳ್ರಿ. ಹೊಟ್ಟಿ ತುಂಬ ಊಟಕ್ಕ ನೀಡ್ರಿ ಅಂತ ಅವರಿಗೆ ತಾಕೀತು ಮಾಡಿ ಬಂದೇನಿ".

"Good. ನಾಗರಿಕರಾಗಿ ನಿಮ್ಮ ಕರ್ತವ್ಯ ನೀವು ಮಾಡಿದಿರಿ. ಒಳ್ಳೇದಾಯ್ತು. ಆಯ್ತು ನಾವೂ ಹೊರಡೋಣ ಇನ್ನ". ದೇಸಾಯಿಯವರ ಜೊತೆ ನಾವೂ ಎದ್ದೆವು.

ಅಂದು ಕೆಲಸ ಬಹಳವಾಗಿದ್ದರಿಂದ ಸಂಜೆ ಕ್ಲಬ್ಬಿಗೆ ಹೋಗದೆ ಮನೆ-ಯಲ್ಲೇ ಆರಾಮವಾಗಿ ಕುಳಿತು ಶಂಕರ ಕರಿದುಕೊಟ್ಟ ಗೋಡಂಬಿಯೊಡನೆ ಬೀರು ಸವಿಯುತ್ತಾ ಒಬ್ಬನೇ ಕುಳಿತಿದ್ದೆ. ಶಂಕರ ಅಡಿಗೆ ಮಾಡಿಟ್ಟು. ಊಟಕ್ಕೆಲ್ಲಾ ಸಿದ್ಧ ಮಾಡಿಟ್ಟು ಮನೆಗೆ ಹೋಗುತ್ತೇನೆಂದು ಹೇಳಿ ಹೊರಗೆ ಹೋದವನು ಮರಳಿ ಬಂದು, "ಒಬ್ಬ ಹೆಂಗಸು ನಿಮ್ಮನ್ನು ಕಾಣಬೇಕಂತ" ಎಂದು ಹೇಳಿದ. ನಾನು ಒಳಬರಲು ಹೇಳಿದೆ, ಜಾನಕಿ ಬಂದು ನಾನು ಕುಳಿತ ರೂಮಿನ ಬಾಗಿಲಲ್ಲಿ ನಿಂತಳು.

"ನಿನ್ನನ್ನು ಎಂದು ಬಿಟ್ಟರು" ಎಂದು ನಾನು ಕೇಳಿದೆ.

"ಇವತ್ತ ಸಂಜೀನ್ಯಾಗ ಬಿಟ್ಟರು" ಎಂದು ಮತ್ತೆ ಸುಮ್ಮನೆ ನಿಂತಳು. ಅವಳನ್ನು ಕಣ್ಣು ಅಗಲಿಸಿ ಸರಿಯಾಗಿ ದಿಟ್ಟಿಸಿ ನೋಡಿದೆ. ಮೂರು ತಿಂಗಳಲ್ಲಿ ಸಾಕಷ್ಟು ಬದಲಾಗಿದ್ದಳು. ಮೈಮೇಲೆ ಒಗೆದ ಸೀರೆಯಿತ್ತು. ಕೂದಲು ಓರಣವಾಗಿತ್ತು. ಮೈಯಲ್ಲೂ ರಕ್ತ ತುಂಬಿತ್ತು. ಛಟ್ಟನೆ ತಲೆ ಎತ್ತಿ ನನ್ನ ನೋಟವನ್ನು ಎದುರಿಸಿದಳು. ಅವಳ ಕಣ್ಣಲ್ಲಿಯ ಮಿಂಚು, ನಾನೇ ದೃಷ್ಟಿ ಹೊರಳಿಸುವಂತೆ ಮಾಡಿತು.

"ನೀವು ಒಬ್ಬರs ಅದೀರಂತ ?"

ಅವಳ ದೃಷ್ಟಿಯಿಂದ ಮಾತಿನ ಅರ್ಥ ಮಾಡಿಕೊಂಡಿದ್ದ ನಾನು 'ಹೌದು' ಅಂದೆ. ಮುಂದೆ ಏನು ಮಾತನಾಡುವಳೋ ಎನ್ನುವ ಕುತೂಹಲ-ದಿಂದ ಸುಮ್ಮನಿದ್ದೆ. ಹೇಳಲೋ, ಬೇಡವೋ ಎಂದು ಹಿಂಜರಿಯುತ್ತ ನೆಲ ನೋಡುತ್ತ ಹೇಳಿದಳು,

"ನನ್ನ ನಿಮ್ಮ ಮನೀಯೊಳಗ ಇಟಕೋತೀರೇನು ? ಅದನ್ನ ಕೇಳಾಕ ಬಂದೆ. ನಿಮಗ ಗೊತ್ತದ ನನಗೂ ಮನೀ ಇಲ್ಲಾ, ಆಸರ ಇಲ್ಲಾ. ಇಲ್ಲೆ ನಿಮ್ಮ ಜೊತೆಗೆ, ಹೆಣ್ಣು ದಿಕ್ಕಿಲ್ಲಾ. ನೀವು ಹೂಂ ಅಂದರ ನಾನs ಇರತೇನಿ".

"ಜಾನಕೀ, ನನಗ ಅಡಗೀಮನೀ ಕೆಲಸಾ ಮಾಡಲಿಕ್ಕೆ ಶಂಕರ ಅದಾನಲ್ಲಾ, ಭಾಳ ದಿನದಿಂದ ಅದಾನ. ಅವನ್ನ ಹ್ಯಾಂಗ ಬಿಡಸಬೇಕು ?"

"ಅವನ್ನ ಬಿಡಸಬ್ಯಾಡರಿ. ಆದರ ನನಗೂ ಆಸರಾ ಕೊಡ್ರಿ ಅಂತ ಕೇಳಲಿಕ್ಕೆ ಬಂದೇನಿ, ನೀವು ಹೇಳಿದ್ದು ಮಾಡತೇನಿ, ಕೆಲಸಾ ಅಂದರ ಕೆಲಸಾ. ಇಲ್ಲಾಂದರ" ಮುಖ ಕೆಂಪಗೆ ಮಾಡಿಕೊಂಡು ಸ್ವಲ್ಪ ತಡೆದು ಹೇಳಿದಳು, "ನನ್ನs ನಿಮಗ ಕೊಡಲಿಕ್ಕೆ ತಯಾರ ಇದ್ದೇನಿ, ನಿಮಗ ಎಲ್ಲಾ ಸುಖಾ ಕೊಡತೇನಿ".

ಅವಳ ಮಾತುಗಳಿಂದ ದಂಗಾದೆ, ಏನೋ ಪಾಪ ಬಡವಿ, ಅನಾಥೆ ಎಂದು ಸಹಾಯ ಮಾಡಿದರೆ ನನಗೆ ಗಂಟು ಬೀಳುತ್ತಿದ್ದಾಳೆಂದು ದಿಗಿಲಾಯಿತು. ಅವಳಲ್ಲಿ ಯೌವನವಿತ್ತು, ಆದರೆ ಇದುವರೆಗೆ ನಾನು ಅನುಭವಿಸಿದ ಹುಡುಗಿಯರ ಸೌಂದರ್ಯ, ಕೋಮಲತೆ, ವಿಲಾಸ ಯಾವದೂ ಇರಲಿಲ್ಲ. ಅವಳನ್ನು ನಾನು ಮುಟ್ಟುವ ಕಲ್ಪನೆಯೇ ಹೇಸಿಕೆ ಎನಿಸಿತು. ಇನ್ನು ಅವಳಿಗೆ ಅರಿವೆ, ಅನ್ನ ಕೊಟ್ಟು ಸಾಕುವಷ್ಟು ಶಕ್ತಿಯೇನೋ ನನಗಿದೆ. ಆದರೆ ಒಬ್ಬನೇ ಇದ್ದ ನಾನು ಇಂಥ ಹರೆಯದ ಹೆಣ್ಣನ್ನು ಮನೆಯಲ್ಲಿ ಇಟ್ಟುಕೊಂಡರೆ ಜನ ಏನಂದಾರು ? ಸಮಾಜದಲ್ಲಿ ನನ್ನ ಗೌರವ, ಪ್ರತಿಷ್ಠೆ ಉಳಿಯುವುದೂ ಸಾಧ್ಯವಿಲ್ಲ. ಉಹುಂ ಏನಾದರೂ ನಾನು ಈ ವಿಷಯದಲ್ಲಿ ದುರ್ಬಲನಾಗಬಾರದು.

ನಾನು ತಲೆ ಅಲುಗಿಸಿದ್ದು ಕಂಡು ಅವಳು ಸೋತ ಸ್ವರದಲ್ಲಿ ಅಂದಳು: "ನನಗೆ ನೀವಾದರೂ ಆಸರಾ ಕೊಡ್ತೀರಿ ಅಂತ ನಂಬಿದ್ದೆ, ಜೇಲಿಗೆ ಹೋಗಿ ಬಂದಾಕಿ ನಾನು. ನನಗ ಯಾರು ಕೆಲಸಾ ಕೊಡ್ತಾರ ಹೇಳ್ರಿ ನೀವs".

ನನಗೂ ಅದು ನಿಜ ಅನ್ನಿಸಿತು. ಎದ್ದು ಪರ್ಸಿನಲ್ಲಿಯ ಹಣ ತೆಗೆದು ಅವಳತ್ತ ಚಾಚಿ ಹೇಳಿದೆ, "ಈ ಊರು ಬಿಟ್ಟು ಬ್ಯಾರೆ ಊರಿಗೆ ಹೋಗು. ಹಿಡಿ ಈ ರೊಕ್ಕಾ".

ಅವಳು ಕೈ ಚಾಚದೆ ನನ್ನತ್ತ ತೀಕ್ಷ್ಣವಾಗಿ ನೋಡಿ ಕೇಳಿದಳು.

"ಕೋರ್ಟಿನ್ಯಾಗ ವಾದಿಸಿದರಲ್ಲ ಆ ಸರಕಾರೀ ವಕೀಲರ ಹೆಸರು ಮನೋಹರ ಕುಲಕರ್ಣಿ ಏನು ?"

"ಹೌದು ಯಾಕ ? ಅದ್ಯಾಕ ಬೇಕಾಗಿತ್ತು ? ಅವರ ಮನೀಗೆ ಹೋಗತೀಯೇನು ? ಆದರೆ ಅವರು ನಿನಗ ಕನಿಷ್ಠ ಐದು ವರ್ಷ ಕಠಿಣ

ಶಿಕ್ಷಾ ಆಗಲಿ ಅಂತ ವಾದಿಸಿದ್ದರು. ನೆನಪ ಅದs ಏನು ನಿನಗ". ನನಗೇಕೋ ಸಿಟ್ಟು ಏರುತ್ತಿತ್ತು.

"ಹೋ ನೆನಪ ಇರದs ಏನು ? ಅವರು ಯಾಕ ಅಷ್ಟು ಕಠಿಣ ಆಗಿ ವಾದಿಸಿದರು ಅನ್ನೂದಕ್ಕ ಕಾರಣ ಏನು ಅನ್ನೂದು ಗೊತ್ತಿಲ್ಲ ನಿಮಗ. ನನಗ ಗೊತ್ತದ" ಉಗುಳು ನುಂಗಿ ತಡೆದು ಹೇಳಿದಳು. "ನೀವು ಈ ಮಾತು ನಂಬತೀರೋ ಇಲ್ಲೋ, ನನಗ ಗೊತ್ತಿಲ್ಲಾ. ನಾ ನಿಮಗ ನನ್ನ ಕಥೀ ಹೇಳಿದ್ನೆಲ್ಲಾ. ನಾವು ಕಿರಾಣಿ ಸಾಮಾನು ತರೂ ಅಂಗಡಿ ಮಾಲಕರ ಮಗಾ ಇದs ಮನೋಹರ ಕುಲಕರ್ಣಿ. ಅವತ್ತು ಕೋರ್ಟಿನ್ಯಾಗ ನಾ ಗುರ್ತು ಹಿಡಿದೆ. ಇವರs ನನ್ನ ಮೊದಲನೇ ಪ್ರಿಯಕರಾs ಹಾ ಹಾ ಹಾs ಹಾs" ಅಟ್ಟಹಾಸದಿಂದ ನಗುತ್ತಿದ್ದ ಅವಳನ್ನು ಬೆಪ್ಪಾಗಿ ನೋಡುತ್ತಿದ್ದೆ. "ಐದು ವರ್ಷ ಯಾಕ ಇಡೀ ಜೀವನ ಪರ್ಯಂತ ನನಗ ಶಿಕ್ಷಾ ಕೊಟ್ಟಾರ ಅವರು. ಜೀವನ ಪರ್ಯಂತ ನಾನು ಹಿಂಗs ಇರಬೇಕು. ಇನ್ನ ಹೊಟ್ಟೀ ತುಂಬಿಸಿಕೊಳ್ಳಲಿಕ್ಕೆ ಮೈ ಮಾರಬೇಕು ಮತ್ತು ಮಕ್ಕಳ್ನ ಹುಟ್ಟಿಸಬೇಕು. ಅವರ ಕುತ್ತಿಗೆ ಹಿಚಕಬೇಕು ಮಂತ್ರೂ ಮಾರಬೇಕು. ಹುಟ್ಟಿಸಬೇಕು. ಹಾ ಹಾ ಹಾs" ಎಂದವಳೇ ದಡ ದಡ ನಡೆದು ಬಾಗಿಲು ದಾಟಿ ಓಡಿದಳು.

ನಾನು ಮಾಡಿದ ಒಂದು ಒಳ್ಳೆಯ ಕೆಲಸವು ವ್ಯರ್ಥವಾದ ನಿರಾಶೆಯನ್ನು ಮರೆಯುವುದಕ್ಕೆ ನಾನು ಮತ್ತೆ ಗ್ಲಾಸ್ ಕೈಗೆತ್ತಿಕೊಂಡೆ.

* * *

# ನಿರುತ್ತರೆ

ಆಫೀಸಿನಿಂದ ಮನೆಗೆ ಬರುವಾಗಲೇ ದಿನಕ್ಕಿಂತಲೂ ಹೆಚ್ಚು ದಣಿವಾಗಿತ್ತು ದೇಹಕ್ಕೆ, ಜೊತೆಗೆ ಮನಸ್ಸಿಗೂ. ಅಂದು ಆಫೀಸಿಗೆ ಬಂದ ಹಳೆಯ ಪರಿಚಿತರೊಬ್ಬರು 'ಗೌರಕ್ಕನ ಆರೋಗ್ಯ ಚೆನ್ನಾಗಿಲ್ಲ. ಪಾಟೀಲರಿಗೆ ತ್ರಾಸಾಗಿದೆ. ಡಾಕ್ಟರರ ಉಪಚಾರ ನಡೆದಿದೆ" ಎಂದು ಹೇಳಿದ್ದು ಶಿವಣ್ಣನ ಚಿಂತೆಗೆ ಕಾರಣವಾಗಿತ್ತು. ಗೌರಕ್ಕ ತನಗೆ ಅಕ್ಕನಷ್ಟೇ ಅಲ್ಲ, ತಾಯಿ ಆಗಿ ಚಿಕ್ಕಂದಿನಿಂದಲೂ ಪಾಲಿಸಿದ್ದಳು. ಗತಿಸಿದ ತಾಯಿಯ ನೆನಪು ಬಾರದಂತೆ ಹತ್ತುವರುಷ ಚಿಕ್ಕವನಾದ ತಮ್ಮನನ್ನು ಎತ್ತಿ ಆಡಿಸಿ, ಉಣಿಸಿ, ತಿನಿಸಿ, ಜೋಗುಳ ಹಾಡಿ ಮಲಗಿಸಿದ್ದಳು. ಒಬ್ಬನೇ ಕಣ್ಣು ಮುಚ್ಚಿ ಕುಳಿತಾಗ ಬಾಲ್ಯದ ಆ ಚಿತ್ರಗಳೆಲ್ಲ ಕಣ್ಣ ಪರದೆಯ ಮೇಲೆ ಮೂಡುವವು. ಅತ್ತಾಗ ಎತ್ತಿಕೊಂಡು ಲಲ್ಲೆಗರೆಯುವ ಆ ಮೆಲುಮಾತುಗಳು ಕೇಳುವವು. ಮಲಗಿಸಿ ಲಾಲಿ ಹಾಡುವ ಆ ಮಧುರಧ್ವನಿ ಕಿವಿಯನ್ನು ತುಂಬುವದು.

ಹೀಗೆ ವಿಚಾರ ಮಾಡುತ್ತ ಶಿವಣ್ಣ ತನ್ನ ಮನೆಯನ್ನು ದಾಟಿ ಮುಂದೆ ಹೋಗುತ್ತಿದ್ದ, ಅಮರ 'ಅಪ್ಪಾಜೀ' ಎಂದು ಕೂಗದಿದ್ದರೆ, ಅವನನ್ನು ಎತ್ತಿಕೊಂಡು ಒಳಗೆ ಬಂದ ಜಯಾಳ ಮುಖ ಅವನಿಗಿಂತಲೂ ಹೆಚ್ಚು ಬಾಡಿತ್ತು. ಪಾಪ, ಗರ್ಭಿಣಿ, ಮನೆಗೆಲಸದಿಂದ ಆಯಾಸವಾಗಿರಬಹುದು ಎಂದುಕೊಂಡ. ಕೈಕಾಲು ತೊಳೆದು ತಿನಿಸು ತಿಂದಾದ ಮೇಲೆ ಅವನ ಕೈಗೊಂದು ಟೆಲಿಗ್ರಾಂ ತಂದುಕೊಟ್ಟಳು ಜಯಾ. 'ನಿನ್ನ ಅಕ್ಕನ ಆರೋಗ್ಯ ಚಿಂತಾಜನಕ. ಕೂಡಲೇ ಹೊರಡು—ಪಾಟೀಲ್' ಎಂದಿತ್ತು. ರಾತ್ರಿ ೯ ಗಂಟೆಯ ಬಸ್ ಹಿಡಿದರೆ ಬೆಳಿಗ್ಗೆ ಪುಣೆ ಮುಟ್ಟಬಹುದಾಗಿತ್ತು. ಜಯಾ ಆಗಲೇ ಅವನ ಸೂಟಕೇಸ್ ತುಂಬಿ ತಯಾರು ಮಾಡಿದ್ದಳು. ಮನೆಯಲ್ಲಿ ಮುಂದಿನ ಎರಡು ತಾಸು ಕಳೆಯುವಷ್ಟರಲ್ಲಿ ಅವನ ಜೀವ ವಿಲಿವಿಲಿ ಒದ್ದಾ-

ಡಿತು, ಅವನ ತಳಮಳವನ್ನು ಚೆನ್ನಾಗಿ ತಿಳಿದಿದ್ದ ಜಯಾ ಮೌನವಾಗಿದ್ದು ಹೊರಡುವಾಗ, "ಪ್ರವಾಸ ಮಾಡೂ ಹಾಂಗಿದ್ದರ ಗೌರಕ್ಕನ್ನ ಇಲ್ಲಿಗೆ ಕರ-ಕೊಂಡು ಬಂದ ಬಿಡ್ರಿ. ಇಲ್ಲೇ ಡಾಕ್ಟರಿಗೆ ತೋರಿಸೋಣು" ಎಂದಾಗ, ಹೌದು, ಅಕ್ಕನ ಈ ಪರಿಸ್ಥಿತಿಯಲ್ಲಿ ತನ್ನಿಂದಾದಷ್ಟು ಸೇವೆ ಮಾಡಲೇ ಬೇಕು ಎಂದು ಸಮಾಧಾನ ತಂದುಕೊಂಡು ಹೊರಟ ಶಿವಣ್ಣ.

ಆದರೆ ಮನೆ ಮುಟ್ಟಿದಾಗ ಆ ಸಮಾಧಾನ ಉಳಿಯಲಿಲ್ಲ. ಪಾಟೀಲ್ ಮಾಮಾ ಅವನನ್ನು ಕೋಣೆಗೆ ಕರೆದುಕೊಂಡು ಹೋದಾಗ ಅವಳಿನ್ನೂ ಗಾಢ ನಿದ್ದೆಯಲ್ಲಿದ್ದಳು. ಹಾಸಿಗೆ ಹಿಡಿದು ಎಷ್ಟೋ ವರ್ಷ ಕಳೆದವರಂತೆ ಕಂಡಳು.

"ಇತ್ತಿತ್ತಲಾಗ ಸರಿಯಾಗಿ ನಿದ್ದೀನ ಮಾಡೂದಿಲ್ಲಾ ಗೌರಾ. ಊಟಾನೂ ಹೋಗೂದಿಲ್ಲಾ. ನಿನ್ನೆ ಭಾಳ ತ್ರಾಸ ಮಾಡಿಕೊಂಡಳು. ಅದಕ್ಕೂS ಡಾಕ್ಟರರು ನಿದ್ದೀ ಇಂಜೆಕ್ಷನ್ ಕೊಟ್ಟಾರ. ಈಗ ಸ್ವಲ್ಪ ಮನೀ ಶಾಂತ ಅದ ನೋಡು. ನೀ ಬಂದದ್ದು ಒಳ್ಳೇದಾತು, ನನಗ ಎಷ್ಟೋ ಭಾರ ಇಳಿದಂಗಾತು. ನೀ ಅವಳನ್ನು ಸರಿಯಾಗಿ ನೋಡಿಕೊಳ್ತಿ ಅನ್ನೋದು ಖಾತ್ರಿ ಅದ ನನಗ. ನನ್ನ ಕಾಲೇಜಿನ ಕೆಲಸಾ, ರಿಸರ್ಚ ಪೇಪರು, ಕಾನ್ಫರೆನ್ಸು, ಮೀಟಿಂಗು, ರೀಡಿಂಗು ಈ ಎಲ್ಲಾದರೊಳಗ ಗೌರಾನ್ನ ಹ್ಯಾಂಗ ಆರೈಕೆ ಮಾಡಬೇಕು ಅನ್ನೂದು ತಿಳೀದS ನನಗ ಹುಚ್ಚ ಹಿಡಿದಾಂಗ ಆಗಿತ್ತು. ಓಹ್SS" ಬೇಸರದಿಂದ ಹೇಳುತ್ತ ಹೊರಗೆ ಹೊರಟ ಮಾಮಾನನ್ನೇ ಹಿಂಬಾಲಿಸಿದ ಶಿವಣ್ಣ.

"ಅಂದ್ಹಾಂಗ ಅಕ್ಕಗ ಏನು ಆಗೇದ? ಡಾಕ್ಟರರು ಏನಂತಾರ? ಜ್ವರಾ ಭಾಳ ದಿವಸ ಬಂದಿದ್ವೇನು? ಟೈಫಾಯ್ಡ್, ನ್ಯೂಮೋನಿಯಾ...?"

"ಛೇ ಛೇ, ನೀ ತಿಳಕೊಂಡ ಹಾಂಗ ಜ್ವರಾ ಏನೂ ಬಂದೇ ಇಲ್ಲಾ. ಯಾವ ಜಡ್ಡೂ ಇಲ್ಲಾ. ಸುಮ್ಮನ ಹಾಂಗS ತ್ರಾಸು. ಮಾನಸಿಕ ತ್ರಾಸು, ಯಾವಾಗಲೂ ವಟವಟ ಅಂತಿರೋದು, ಎಲ್ಲಾದಕ್ಕೂ ತಕರಾರು ಮಾಡೂದು. ಶಾಂತಿ–ಸಮಾಧಾನದಿಂದ ತಾನೂ ಇರು ಹಾಂಗಿಲ್ಲಾ, ಉಳಿ-ದವರನ್ನೂ ಇರಗೊಡುಹಾಂಗಿಲ್ಲಾ. ನನಗಂತೂ ಸಾಕಾಗಿ ಹೋಯ್ತು.

ಮನುಷ್ಯನ ತಾಳ್ಮೆಗೂ ಒಂದು ಮಿತಿ ಇರ್ತದ". ಹುಬ್ಬು ಗಂಟಿಕ್ಕಿ ಆವೇಶ-ದಿಂದ ಮಾತನಾಡುತ್ತಿದ್ದ ಮಾವನಿಗೆ ಯಾವ ಉತ್ತರ ಕೊಡಲೂ ತಿಳಿಯ-ಲಿಲ್ಲ ಶಿವಣ್ಣನಿಗೆ. ಅವರೇ ಮುಂದುವರಿಸಿದರು,

"ಶಿವೂ, ನೀ ಹೇಳು. ಗೌರಾಗ ಈಗ ಏನು ಕಡಿಮಿ ಆಗೇದ ? ಸ್ವಂತ ಮನೀ, ಕಾರು, ಅಡಗಿಯಾಕಿ, ಮುತ್ತಿನಂತಾ ಮಗಾ, ಮಗಳು..."

"ಮಾಮಾs, ಅನುರಾಧಾ ಈಗ ಅಲ್ಲೇ ಅದಾಳ ? ಅಕ್ಕ ಮಲಗಿದ್ದು ಆಕೀಗೆ ಗೊತ್ತಿಲ್ಲೇನು ?"

"ಆಕೀ ಕಾನಪುರದಾಗ ಅದಾಳ. ಪಿಯೆಚ್‌ಡಿಗೆ ಸಬ್ಜೆಕ್ಟ ಚೂಜ ಮಾಡ್ಯಾಳಂತ. ಮೊನ್ನೆ ಪತ್ರಾ ಬರದಿದ್ಲು. ಆಕೀಗೆ ಸೆಮಿನಾರ ಅದ, ಅಭ್ಯಾಸ ಭಾಳ ಮಾಡೂದ ಅದ. 'ಓದಲಿಕ್ಕೆ ಟೈಮು ಸಿಗವೊಲ್ಲದು. ಎಷ್ಟೂ ಪುರಸತ್ತಿಲ್ಲ' ಅಂತ ಬರದಾಳ. ಅನೂಪಗೂ ಸುದ್ದೀ ತಿಳಿಸಿದ್ದೆ. 'ಅವ್ವನ ಆರೋಗ್ಯ ಕೆಟ್ಟದ್ದು ಕೇಳಿ ಭಾಳ ಕೆಟ್ಟ ಅನಿಸ್ತು. ಬಹುಶಃ ಈ ವರ್ಷ ಭಾರತಕ್ಕೆ ಬರಲಿಕ್ಕೆ ಆಗಲಿಕ್ಕಿಲ್ಲಾ. ದೊಡ್ಡ ಹಾಸ್ಪಿಟಲ್‌ಗೆ ಎಡ್ಮಿಟ್ ಮಾಡ್ರಿ, ಸ್ಪೆಷಲಿಸ್ಟಗ ತೋರಿಸ್ರಿ. ಕಾಳಜಿ ತೊಗೊಳ್ರಿ' ಅಂತ ಬರದಾನ".

"ಅನೂಗ ನೀವು ಬಾ ಅಂತ ಬರೀಬೇಕಾಗಿತ್ತು. ಅವಳ ತಾಯಿ ಭಾಳ ಹಾಸಿಗಿ ಹಿಡದಾಳ ಅಂತ ತಿಳಿಸಬೇಕಾಗಿತ್ತು" ಶಿವಣ್ಣನ ಹೊಟ್ಟೆಯಲ್ಲಿಯ ಮಾತು ಸೌಮ್ಯವಾಗಿಯೇ ಹೊರಗೆ ಬಂದಿತ್ತು.

ಅಷ್ಟಕ್ಕೇ ಪಾಟೀಲರು ಸಿಡಿದೆದ್ದರು. "ಶಿವೂ, ವಯಸ್ಸು ಆದಂಗ ಮನುಷ್ಯಾನ ಮೊದಲಿನ ಆರೋಗ್ಯ ಉಳಿಯೂದಿಲ್ಲ. ಒಂದು ದಿನಾ ಹಾಂಗ ಇರತಾರ, ಒಂದು ದಿನಾ ಹೀಂಗ ಇರತಾರ. ಗೌರಾಗೂ ಈಗ ನಾಲ್ವತ್ತೆಂಟು ವರ್ಷ ನಡೀತಾವ, ಏನೋ ನಾಲ್ಕೆಂಟು ದಿನಾ ತ್ರಾಸಾತು, ಮಲಗ್ಯಾಳ. ಅಂಡಪ್ಪಕ್ಕ ಏನು ಜಗತ್ತು ಮುಳುಗಿ ಹೋದ್ಹಾಂಗ ಮಾತಾಡ್ತೀಯಲ್ಲ. ಈಗ ನೀನು ಬರಲಿಕ್ಕೇ ಬೇಕು ಅಂತ ಜುಲುಮಿ ಮಾಡಿ ಬರದರ, ಅನೂ ಕಾನಪುರದಿಂದ ಬರತಾಳ, ಆದರ ಅವರ ಕರಿಯರ್ ಹಾಳಾಗೋದಿಲ್ಲೇನು ? ಬುದ್ಧಿವಂತ ಹುಡುಗಿ, ಓದಬೇಕು ಅಂತ ಆಸೇ ಮಾಡ್ಯಾಳ. ಇಲ್ಲೆ ಬಂದು ಆಕಿ ಮಾಡೂದರೆ ಏನದ ? ಯಮುನಾ ಎಲ್ಲಾ ಮಾಡ್ತಾಳ. ಮಗಳು

ಕಣ್ಣ ಮುಂದ ಇದ್ದರ ಆಕೀನೂ ಸುಮ್ಮನ ಇರೂದಿಲ್ಲಾ. ಲಗ್ನಾ ಮಾಡ್ರಿ, ಲಗೂನ ಲಗ್ನಾ ಮಾಡ್ರಿ ಅಂತ ಬೆನ್ನ ಹತ್ತತಾಳ. ಆಕೀಗೆ ಈಗ ಲಗ್ನಾ ಆಗೂ ಮನಸ್ಸಿಲ್ಲಾ. ಇವರ ಜಗಳಾ ನೋಡಲಾರದೆ ಅನುರಾಧಾ ಕಾನಪುರದಾಗ ಇರತೀನಿ ಅಂದ್ಲು. ಓ. ಕೆ. ಅಂದ್ಬಿಟ್ಟೆ. ಈ ಗೌರಾಗಂತೂ ಯಾವಾಗ ಬುದ್ಧೀ ಬರತದೋ ಏನೋ. ತಾನಿ ಇನ್ನೂ ಹದಿನೆಂಟನೇ ಶತಮಾನದಾಗ ಇದ್ದಾಂಗ ಆಡತಾಳ. ಈಗ ಜಗತ್ತು ದಿನಕ್ಕದಿನಾ ಎಷ್ಟ ಮುಂದವರೀತದ ಅನ್ನೂದರ ಎಚ್ಚರಾನ ಇಲ್ಲಾ. ಜಗತ್ತಿನ ಕೂಡ ನಾವು ಬದಲ ಆಗಬೇಕು ಅನ್ನೂ ಬುದ್ಧಿನೂ ಇಲ್ಲಾ. ಛೇ, ನನಗಂತೂ ಸಾಕಾಗಿ ಹೋಗೇದ, ಆಕಿ ಕೂಡ".

ಕಪಾಳಕ್ಕೆ ಹೊಡೆಸಿಕೊಂಡವನಂತೆ ಶಿವಣ್ಣ ಸುಮ್ಮನೆ ಅಕ್ಕನ ಕೋಣೆಗೆ ತಿರುಗಿ ಬಂದ. ಅವಳಿಗೆ ಎಚ್ಚರವಾಗುತ್ತಿದ್ದ ಹಾಗ ಕಂಡಿತು. ಹತ್ತಿರ ಹೋಗಿ ಕುಳಿತು 'ಅಕ್ಕಾ' ಎಂದ, ಮೆಲು ದನಿಯಲ್ಲಿ. ಕಣ್ಣು ತೆಗೆದು ಅವನನ್ನು ನೋಡಿದಳು. ಶಿವಣ್ಣ ಬೆಚ್ಚಿ ಬಿದ್ದ. ಅಕ್ಕ ತನ್ನನ್ನು ಗುರುತು ಹಿಡಿಯಲೇ ಇಲ್ಲವೆನಿಸಿತು. ಮನಸ್ಸಿಗೆ ಆಘಾತವಾಯಿತು. ಆದರೂ ಗಟ್ಟಿ ಧೈರ್ಯಮಾಡಿ ಇನ್ನೂ ಜೋರಾಗಿ "ಗೌರಕ್ಕಾಽ" ಅಂದ. ಅವಳ ಎರಡೂ ಕೈ ಹಿಡಿದು-ಕೊಂಡು. ಅವನನ್ನು ದಿಟ್ಟಿಸಿ ನೋಡಿ ರಮಿಸುವವಳಂತೆ ಅವನ ಕೆನ್ನೆ ಸವರುತ್ತ ಮುದ್ದುಗರೆದಳು. "ಶಿವೂ. ಶಿವಣ್ಣಾಽ ಬಿದ್ದೇನೋ, ಭಾಳ ಪೆಟ್ಟಾಯ್ತೇನು ಬಾಳಾಽ". ಕ್ಷಣಹೊತ್ತು ದಿಗ್ಭ್ರಮೆಯಾದರೂ ಅವಳು ರೋಗಿ ಎನ್ನುವುದನ್ನು ಮನಸ್ಸಿಗೆ ತಂದುಕೊಂಡು—

"ಹೂಂ, ಹೌದಕ್ಕಾಽ ಬಿದ್ದೆ" ಎಂದ, ಅಳುಮೋರೆ ಮಾಡಿ, ಅತ್ತಿತ್ತ ನೋಡಿದ, ಹತ್ತಿರ ಯಾರೂ ಇರಲಿಲ್ಲ.

"ಹೂಂ, ನಾ ಹೇಳಿದರ ನೀ ಎಲ್ಲಿ ಕೇಳತೀ ? ಆಯುಸ್ಕ್ರೀಮು ತಿನ್ನಾಕ ಓಡಿ ಹೋದಿ, ಬಿಸಲಾಗ ಓಡಬ್ಯಾಡ ಅಂದರ ಕೇಳಲಿಲ್ಲಾ. ಇರಲಿ ಬಿಡು ಅಳಬ್ಯಾಡಾ, ಪಟ್ಟೀ ಕಟ್ಟತೀನಿ".

ಅವಳ ಮಾತು ಕೇಳುತ್ತ ಅಕ್ಕನ ಕೈ ಸವರುತ್ತಿದ್ದ ಶಿವಣ್ಣ, ಅವಳು ಮತ್ತೆ ಕಣ್ಣು ಮುಚ್ಚಿದ್ದನ್ನು ಕಂಡು ಶಬ್ದ ಮಾಡದಂತೆ ಮೇಲೆ ಎದ್ದ.

* * *

ಡಾ॥ ದತ್ತರ ಹೇಳಿಕೆಯಂತೆ, ಜಯಾಳಿಗೆ, ೪–೫ ದಿನ ಬಿಟ್ಟು ಗೌರಕ್ಕ-ನೊಡನೆ ಬರುತ್ತೇವೆ— ಎಂದು ತಾರು ಕೊಟ್ಟ. ಅಡಿಗೆಯು ಯಮುನಾ ಎಲ್ಲವನ್ನೂ ಮಾಡಿಕೊಂಡು ಹೋಗುತ್ತಿದ್ದಳು. ಚಹ, ತಿಂಡಿ, ಹಾಲು, ನೀರು, ಸ್ನಾನ, ಊಟ ಎಲ್ಲವೂ ಹೊತ್ತಿಗೆ ಸರಿಯಾಗಿ ಆಗುತ್ತಿತ್ತು. ಮಾವಾ ಕಾಲೇಜಿಗೆ ಹೋಗುವ ಮೊದಲು ಕೋಣೆಯಲ್ಲಿ ಬರುತ್ತಿದ್ದರು.

ಗೌರಾ ಹೇಗಿದ್ದೀ ?

ನಿದ್ದಿ ಬಂದಿತೇ ?

ಔಷಧಿ ತೊಗೊಂಡಿಯಾ ?— ಎಂದು ಕೇಳುತ್ತಿದ್ದರು. ಅಲ್ಲಿಗೆ ಮುಗಿಯಿತು ಅವರ ಮಾತು, ಕರ್ತವ್ಯ ಎರಡೂ. ಮಾತಿನಲ್ಲಿ ಹೊಸತನ-ವೇನೂ ಇರಲಿಲ್ಲ. ದಿನವೂ ಅವೇ ಪ್ರಶ್ನೆ, ಅದೇ ಮೌನ !

ಮಾವಾ ಕೋಣೆಯೊಳಗೆ ಬಂದಾಗ ಗೌರಕ್ಕ ಎಚ್ಚರವಿದ್ದರೂ ಅವರತ್ತ ನೋಡಲಿಲ್ಲ. ಪ್ರಶ್ನೆ ಮಾಡಿದಾಗ ಅಪರಿಚಿತರಂತೆ ಅವರನ್ನು ದಿಟ್ಟಿಸಿ ನೋಡಿ ಸುಮ್ಮನಿದ್ದಳು. ಶಿವಣ್ಣನೇ ಉತ್ತರ ಕೊಟ್ಟ. ಆದರೆ ಅದೇ ಗೌರಕ್ಕ ಅಂದು ಸಂಜೆ "ನಿನ್ನ ಮಾವಾ ಎಲ್ಲೆ ಅದಾರ? ಊರಿಗೆ ಹೋಗ್ಯಾರೇನು? ನೋಡೇ ಇಲ್ಲಲ್ಲ ನಾನು ಅವರನ್ನ" ಎಂದು ಕೇಳಿದಾಗ ಶಿವಣ್ಣ ಅಚ್ಚರಿಪಟ್ಟ. ಹೆಜ್ಜೆ ಹೆಜ್ಜೆಗೆ ಅವನಿಗೆ ಹೊಸ ಅಕ್ಕ ಕಾಣಿಸುತ್ತಿದ್ದಳು. ಆದರೂ ಡಾ॥ ದತ್ತರ ಮಾತು ನೆನಪಾಗಿ, ಅವಳಿಗೆ ಮಾವಾ ಬಂದು ಹೋದ ವಿಷಯ ತಿಳಿಸಿದ. ಇವಳು ಇಷ್ಟಗಲ ಮುಖ ಅರಳಿಸಿ "ಹೌದೇನು ? ನನಗ ಗೊತ್ತs ಇಲ್ಲ. ಅವರು ಬಂದಾಗ ನನಗ ನಿದ್ದಿ ಹತ್ತಿತ್ತು ಕಾಣ್ತದ." ಎಂದಾಗ ಸುಮ್ಮನಿದ್ದ. ದಿನಕ್ಕೊಮ್ಮೆಯಾದರೂ ದತ್ತರನ್ನು ಭೆಟ್ಟಿಯಾಗಿ ಅವಳ ಮಾತುಗಳು, ಪ್ರಶ್ನೆಗಳು, ಪ್ರತಿಕ್ರಿಯೆಗಳ ವಿವರವನ್ನು ಒಪ್ಪಿಸಿ ಅವರಿಂದ ಸಲಹೆ ಪಡೆಯುತ್ತಿದ್ದ.

ಒಂದು ಮುಂಜಾನೆ ಗೌರಕ್ಕ ಬೇಗ ಎದ್ದು ಸ್ನಾನ, ಪೂಜೆ ಮುಗಿಸಿ ಯಮುನಾಳ ಸಹಾಯದಿಂದ ಅಂದಿನ ಅಡಿಗೆಯನ್ನೂ ಮಾಡಿದಳು. ಗಂಡನಿಗೆ ಕಾಲೇಜಿಗೆ ಲೇಟಾಗುತ್ತದೆ ಎಂದು ಡೈನಿಂಗ ಟೇಬಲ್ ಮೇಲೆ ಎಲ್ಲವನ್ನೂ ತಂದಿಟ್ಟು, ಊಟಕ್ಕೆ ನೀಡಲೂ ತಯಾರಾಗಿದ್ದಳು. ಸ್ನಾನ ಮುಗಿಸಿ ಬಂದ

ಮಾಮಾ ಊಟಕ್ಕೆ ಬರದೆ ಡ್ರೆಸ್ ಮಾಡಿಕೊಂಡೇ ಬಂದು ತಾವು ಮೀಟಿಂಗಿಗೆ ಹೋಗಬೇಕು, ಈಗ ಊಟ ಮಾಡುವದಿಲ್ಲ, ಡಿನ್ನರ ಅಲ್ಲಿಯೇ ಇದೆ— ಎಂದಾಗ, ಗೌರಕ್ಕನ ಮುಖ ನೋಡಬೇಕಿತ್ತು. ಬಟ್ಟಲಲ್ಲಿ ಪಾಯಸ ಹಾಕಿ ಕೊಟ್ಟು "ಇದನ್ನಾದರೂ ಸ್ವಲ್ಪ ತೊಗೊಳ್ರಿ" ಎಂದು ಅಂಗಲಾಚಿದಳು.

"ಒಲ್ಲೆ ಅಂದರ ಯಾಕ ಜುಲುಮಿ ಮಾಡತೀ ಗೌರಾs. ನಿನ್ನ ಅಡಗಿ, ರುಚಿ, ಅಲಂಕಾರ, ಅಭಿಪ್ರಾಯ, ವಿಚಾರ ಎಲ್ಲಾ ಇನ್ನೊಬ್ಬರ ಮ್ಯಾಲೆ ಹಾಂಗ ಹೇರಬಾರದು ಅಂತ ನಾ ನಿನಗ ಎಷ್ಟ ಸಾರೆ ಹೇಳಿಲ್ಲಾ. ನಾ ನಿನಗ ಹಾಂಗ ಯಾವದಕ್ಕಾದರೂ ಒತ್ತಾಯ ಮಾಡ್ತೀನೇನು? ನಿನಗ ಎಷ್ಟು ಹೇಳಿದರೂ ತಲ್ಯಾಗ ಹೋಗೂದಿಲ್ಲ. ಪ್ರೀತಿ ಪ್ರೀತಿ ಅಂತ ಹೇಳಿ, ಇನ್ನೊಬ್ಬರಿಗೆ ಕಷ್ಟಾ ಕೊಡೂದು ಇದೆಂಥಾ ಪ್ರೀತಿ ?" ಎಂದು ಒದರಾಡಿ ಹೊರಟೇ ಹೋದರು.

ಬಿಳಿಚಿಕೊಂಡಿದ್ದ ಗೌರಕ್ಕನ ಮುಖ ಆವೇಶದಿಂದ ಕೆಂಪಾಯಿತು. ತುಟಿ ನಡುಗುತ್ತಿದ್ದವು. ಮುಷ್ಟಿ ಬಿಗಿಯಿತು. ಇನ್ನೊಂದು ಗಳಿಗೆಯಲ್ಲಿ ಟೇಬಲ್ ಮೇಲಿನ ಸಾಮಾನುಗಳನ್ನೆಲ್ಲ ತಳ್ಳಿಬಿಡಲು ಕೈ ಎತ್ತಿದಳು. ಅಷ್ಟು ಹೊತ್ತಿನವರೆಗೆ ಸುಮ್ಮನೆ ನೋಡುತ್ತಿದ್ದ ಶಿವಣ್ಣ, ಹತ್ತಿರ ಬಂದು ಅವಳ ಹೆಗಲ ಮೇಲೆ ಮೃದುವಾಗಿ ಕೈಯಿಟ್ಟ. ಗೌರಕ್ಕ ನಿಧಾನವಾಗಿ ಅವನತ್ತ ತಿರುಗಿದಳು. ಶಿವಣ್ಣ ತನ್ನ ಹೊಟ್ಟೆ ಬಡಿದುಕೊಂಡು ಐದು ಬೆರಳು ತುಟಿಗಿಟ್ಟು ಹಸಿವಾಗುತ್ತಿದೆ ಎನ್ನುವಂತೆ ಸನ್ನೆ ಮಾಡಿದ. ಗೌರಕ್ಕ ಮಿಸುಕಲಿಲ್ಲ. ಅವಳ ಕಿವಿಯ ಹತ್ತಿರ ಬಾಯಿ ಇಟ್ಟು ಮೆತ್ತಗೆ "ಅಕ್ಕಾs ಹಸಿವಿ ಆಗೇದ" ಎಂದು ಮಕ್ಕಳಂತೆ ಅಂಗಲಾಚಿದ. ಅವಳ ಆವೇಶ ಇಳಿಯಿತು. ಕಣ್ಣು ತುಂಬಿ ನೀರು ಹೊರಚೆಲ್ಲಿದವು. ಸೆರಗಿನಿಂದ ಒರೆಸುತ್ತ, "ಬಾ, ಶಿವಣ್ಣಾ[ ಹೊತ್ತಾಯ್ತು, ನಿನಗ ಊಟಕ್ಕ ನೀಡ್ತೇನಿ" ಎಂದು ತಾಟು ಇಟ್ಟಳು. ಅಕ್ಕನ ಸಮಾಧಾನಕ್ಕೆ ಶಿವಣ್ಣ ಹೊಟ್ಟೆ ಬಿರಿಯುವಂತೆ ಊಟ ಮಾಡಿದ, ಹಾಸಿಗೆಯ ಮೇಲೆ ಹೊರಳಿದ.

ಎದ್ದು ಮುಖ ತೊಳೆದು ಬಂದ ಶಿವಣ್ಣನಿಗೆ ಯಮುನಾ ಗೌರಕ್ಕ ಉಪವಾಸವಿದ್ದ ಸುದ್ದಿ ಹೇಳಿದಳು. ಶಿವಣ ಅವಳ ಕೈಯ ಟ್ರೇ ಇಸಿದು

ಕೊಂಡು ಅಕ್ಕನ ಕೋಣೆ ಹೊಕ್ಕ. ಉಪ್ಪಿಟ್ಟಿನ ಪ್ಲೇಟು ಅವಳ ಮುಂದೆ ಹಿಡಿದಾಗ,

"ನನಗ ಏನೂ ಬ್ಯಾಡಾ ಶಿವಣ್ಣಾ" ಎಂದು ಉಸಿರ್ಗರೆದಳು.

"ಅಕ್ಕಾ ಮಾಮಾ ಅಲ್ಲಿ ಹೊಟ್ಟೆ ತುಂಬಾ ಊಟಾ ಮಾಡಿರತಾರ. ನೀ ಯಾಕ ಇಲ್ಲಿ ಉಪವಾಸ ಇರಬೇಕು ?"

"ನಿನ್ನ ಮಾಮಾ ನನ್ನ ಮ್ಯಾಲೆ ಭಾಳ ಪ್ರೀತಿ ಅದಾರ ಶಿವೂ. ಅದಕ್ಕ ನನಗ ಎಲ್ಲಾ ಸ್ವಾತಂತ್ರ್ಯ ಕೊಟ್ಟಾರ. ಎಲ್ಲಾ ಅಂದರ ಎಲ್ಲಾದಕ್ಕೂ. ನಾ ಬೇಕಾದ್ದು ಮಾಡಬಹುದು, ಬೇಕಾದರೆ ಅಳಬಹುದು, ನಗಬಹುದು, ಉಪವಾಸ ಇರಬಹುದು. ಊಟಾನೂ ಮಾಡಬಹುದು, ಇಷ್ಟ್ಯಾಕ ಯಾಕ, ಜೀವಂತ ಇದ್ದರೂ ಇರಬಹುದು, ಸತ್ತರೂ ಅಡ್ಡಿಯಿಲ್ಲ, ಎಲ್ಲಾದಕ್ಕೂ ಸ್ವಾತಂತ್ರ್ಯ ಅದ ನನಗ. ಯಾರೂ ಬ್ಯಾಡ ಅನ್ನೂದಿಲ್ಲಾ. ನಾ ಸತ್ತರ ಯಾರಿಗೂ ದುಃಖ ಆಗೂದಿಲ್ಲ. ನಾ ಯಾರಿಗೂ ಬೇಕಾಗಿಲ್ಲ, ನನ್ನ ಅವಶ್ಯ-ಕತಾನ ಯಾರಿಗೂ ಇಲ್ಲಾ."

ಅಳು–ನಗುವಿನ ಮಧ್ಯೆ ಗೌರಕ್ಕ ಹೇಳಿದ ಮಾತು ಶಿವೂನ ಹೃದಯ-ವನ್ನು ಚುಚ್ಚಿತು.

ಅವನೂ ಅಷ್ಟೇ ಕಳಕಳಿಯಿಂದ ಹೇಳಿದ, "ಯಾಕ ಯಾರಿಗೂ ಬೇಕಾ-ಗಿಲ್ಲ ? ನಮಗೆಲ್ಲ ನೀ ಬೇಕ ಬೇಕು—ಮಾಮಾಗ, ಅನುರಾಧಾಗ, ಅನೂ-ಪಗ, ನನಗ, ಜಯಾಗ. ನೀನ ತಪ್ಪು ತಿಳಕೊಂಡೀದಿ. ಅಮರ ಅಂತೂ ಅತ್ತ್ಯಾ ಅತ್ತ್ಯಾ ಅಂತ ನಿನ್ನ ಎಷ್ಟ ನೆನಸತಾನ."

"ಶಿವೂ, ಜಯಾ ಹ್ಯಾಂಗ ಇದ್ದಾಳ ? ಹಿಂದಿನ ಪತ್ರದಾಗ ಬಸಿರ ಅದಾಳಂತ ಬರದಿದ್ದಿ. ಈಗ ಎಷ್ಟು ತಿಂಗಳು ? ಹುಚ್ಚಿ, ನಾನೊಬ್ಬಾಕಿ. ನೀ ಬಂದು ಇಷ್ಟ ದಿನಾ ಆದರೂ ಅಮರ ಹ್ಯಾಂಗ ಅದಾನಂತ ಸುದ್ದಾ ನಾನು ಕೇಳಿಲ್ಲಾ, ಅಷ್ಟ ಅರವು–ಮರವು ನಂದು."

"ಜಯಾ ಆರಾಮ ಅದಾಳ ಅಕ್ಕಾ. ಈಗ ಏಳನೇ ತಿಂಗಳು ನಡೀತದ."

"ಅಮರ ಭಾಳ ತುಂಟ ಆಗಿರಬೇಕಲ್ಲಾ; ಅವನ್ನ ನೋಡಬೇಕು ಅಂತ ಭಾಳ ಅನಸ್ತದ. ಬೆಳಗಾಂವಿಗೆ ಹೋಗೂಣೇನು ?" ಗೌರಕ್ಕ ಮುಗ್ಧ ಮಗುವಿನಂತೆ ಕೇಳಿದಳು.

"ಹೌದಕ್ಕಾs ಬೆಳಗಾಂವಿಗೆ ನಿನ್ನ ಕರಕೊಂಡು ಹೋಗಲಿಕ್ಕೇ ಬಂದೇನಿ ನಾನು. ಜಯಾ, ಅಮರ ನಿನ್ನ ದಾರಿ ನೋಡಲಿಕ್ಕೆ ಹತ್ಯಾರ, ಆದರ ಡಾ॥ ದತ್ತ ಹೇಳ್ಯಾರ, ಮಿಸೆಸ್ ಪಾಟೀಲರು ತಿಂದು ಉಂಡು ಗಟ್ಟಿಯಾಗಿ ಶಕ್ತಿ ಬಂದ ಮ್ಯಾಲೆ ಊರಿಗೆ ಹೋಗಲಿಕ್ಕೆ ಅಡ್ಡಿಯಿಲ್ಲಾ ಅಂತ. ಅದಕs ಹಿಡಿ ಈ ಪ್ಲೇಟು. ಮೊದಲ ಈ ಉಪ್ಪಿಟ್ಟು ತಿನ್ನು. ಹಾಂ ಹಾಂಗs. ನೋಡು ಮುಂಜಾನೆ ನೀ ಮಾಡಿದ ಪಾಯಸ ಭಾಳ ರುಚಿಯಾಗಿತ್ತು. ನೀನೂ ಸ್ವಲ್ಪ ಸ್ಯಾಂಪಲ್ ನೋಡು. ಏ ಯಮುನಕ್ಕಾs ಮುಂಜಾನಿ ಪಾಯಸಾ ಉಳಿದಿದ್ದರ ಒಂದಿಷ್ಟು ತೊಗೊಂಡು ಬಾ, ನಾನೂ–ಅಕ್ಕಾ ತಿಂತೀವಿ."

"ಶಿವೂ, ನಮ್ಮ ಅನುಪನೂ ಸಣ್ಣಾಂವಿದ್ದಾಗ ಅಮರನಾಂಗ ಭಾಳ ತುಂಟ ಇದ್ದಾ. ನನಗಂತೂ ಅವನ್ನ ಹಿಡದು ಹಿಡದು ಸಾಕಾಗಿ ಹೋಗಿತ್ತು. ಇವರು ಕಾಲೇಜಿಗೆ ಹೋದಾಗಿಂದಾ ಬರೂ ತನಕಾ ಹೊತ್ತು ಹ್ಯಾಂಗ ಹೋಗತಿತ್ತೊ ನನಗs ತಿಳಿತಿದ್ದಿಲ್ಲಾ, ಹಾಂ, ಅಂದಾಂಗ ನಿನಗ ಹೇಳಲಿಕ್ಕೆ ಮರತಿದ್ದೆ. ಅವರೂ ಹೇಳಿರಲಿಕ್ಕಿಲ್ಲ, ಅನುಪಗ ಮಗಳು ಹುಟ್ಯಾಳಂತ. ಕೇಬಲ್ ಕಳಿಸಿದ್ದಾ. ಹುಡುಗೀಗೆ ಅವಳ ತಾಯೀ ಹಾಂಗ ನೀಲಿ ಕಣ್ಣು, ಹೊಂಬಣ್ಣದ ಕೂದಲಾ ಇರಬೇಕು. ಆ ಶೋಕೇಸಿನ್ಯಾಗಿನ ಗೊಂಬಿ ಹಾಂಗ ಕಾಣತಿರಬೇಕು. ನೋಡಲಿಕ್ಕೆ ಭಾಳ ಛಂದ ಇರಬೇಕು." ದೊಡ್ಡ ದೊಡ್ಡ ಕಣ್ಣುಗಳನ್ನು ಅರಳಿಸಿ ತಾನು ಕಾಣದ ಮೊಮ್ಮಗಳ ವರ್ಣನೆ ಮಾಡುತ್ತಿದ್ದ ಗೌರಕ್ಕನ ಮಾತು ಕೇಳುತ್ತ ಶಿವಣ್ಣ ತಿನ್ನುವುದನ್ನೇ ಮರೆತ.

* * *

ಶಿವಣ್ಣ, ಗೌರಕ್ಕ ಕೂಡಿ ಬೆಳಗಾಂವಿಗೆ ಹೋಗುವ ದಿನ ನಿಶ್ಚಿತವಾಗಿತ್ತು. ಜಯಾ ಬಸಿರಿ ಎಂದು ತರತರದ ತಿಂಡಿ ಮಾಡಿಸಿ ಕಟ್ಟಿದಳು. ಅಮರನಿಗೆ ರೆಡಿಮೇಡ ಅರಿವೆ, ಆಟಿಗೆ ಸಾಮಾನು, ಶಿವಣ್ಣನಿಗೆ ಪ್ರೀತಿ ಎಂದು ಅಂಜೂರ, ದ್ರಾಕ್ಷಿ ಹಣ್ಣಿನ ಬುಟ್ಟಿಗಳನ್ನು ಖರೀದಿ ಮಾಡಿದಳು ಗೌರಕ್ಕ. ಮಾವಮಾ ಆಕೆ

ಕೇಳಿದಷ್ಟು ಹಣ ಕೈಗೆ ಕೊಟ್ಟು, ಹೆಂಡತಿಯ ಬಗ್ಗೆ ಕಾಳಜಿ ಇದೆ ಎನ್ನುವು-ದನ್ನು ಶಿವಣ್ಣನಿಗೆ ಖಚಿತಪಡಿಸುವ ಯತ್ನ ಮಾಡಿದರು, ಆದರೂ ಶಿವಣ್ಣನಿಗೆ ಅಕ್ಕನ ಬದುಕಿನಲ್ಲಿಯ ಕೊರತೆ ಏನು ಎನ್ನುವ ಅರಿವಾಗಿತ್ತು. ಅದನ್ನು ಸಾಧ್ಯವಿದ್ದಷ್ಟು ತಾನೇ ತುಂಬಿಕೊಡಲು ನಿಶ್ಚಯಿಸಿದ್ದ.

ಗೌರಕ್ಕ ತುಂಬಾ ಸಂಭ್ರಮದಿಂದ ಮನೆತುಂಬ ಓಡಾಡುತ್ತಿದ್ದಳು, ಗಂಡನ ರೂಮನ್ನು ಸ್ವಚ್ಛಮಾಡಿದಳು. ಅವರ ಅರಿವೆಗಳನ್ನೆಲ್ಲಾ ಅಗಸನಿಗೆ ಕೊಟ್ಟಳು. ಅಗಸನಿಂದ ಬಂದವುಗಳನ್ನು ಹುಡುಕಿ ತೆಗೆದು ರಿಪೇರಿ ಮಾಡಿ-ದಳು. ಅವರ ಊಟ–ತಿಂಡಿಯ ಬಗ್ಗೆ ಯಮುನಾಳಿಗೆ ಮೇಲಿಂದ ಮೇಲೆ ಎಚ್ಚರಿಕೆ ಕೊಟ್ಟಳು. ನೆರೆಮನೆಯವರಿಗೆಲ್ಲಾ ಹೇಳಿ ಬಂದಳು. ಒಂದು ಮನೆ-ಯಿಂದ ಮೂರು ತಿಂಗಳ ಪುಟ್ಟ ಮಗುವನ್ನು ತಂದು ತಮ್ಮನಿಗೆ ತೋರಿಸಿ, ಈ ಮಗು ಹುಟ್ಟಿದಾಗ ತಾನೇ ಹತ್ತಿರವಿದ್ದೆ ಎಂದಳು. ಮಗುವಿಗೆ ತಾನೇ ಎಣ್ಣೆ ನೀರು ಹಾಕುತ್ತಿದ್ದೆ. 'ಅಮೃತಾ' ಎಂದು ಅವಳಿಗೆ ಹೆಸರನ್ನೂ ತಾನೇ ಆರಿಸಿ ಇಟ್ಟೆ—ಎಂಬಳು. ಆ ಎಳೆ ಮಗುವಿನ ತಾಯಿಗೆ ಅದರ ಆರೈಕೆಯ ಬಗ್ಗೆ ಅರ್ಧ ತಾಸು ಲೆಕ್ಚರ್ ಕೊಟ್ಟಳು. ಅಮೃತಾಳನ್ನು ಬಿಟ್ಟೂ ಬಿಡಲಾರದೆ ಮನೆಗೆ ಕಳಿಸಿದಳು. ಕೆಲದಿನಗಳ ಹಿಂದೆ ರೋಗಿಯಂತೆ ಮಲಗಿದ್ದ ಅಕ್ಕ ಇವಳೇ ಏನು ಅನ್ನುವಷ್ಟು ಅಚ್ಚರಿ ಶಿವಣ್ಣನಿಗೆ.

ಅಂದು ಸಂಜೆ ಕಾನಪುರದಿಂದ ಟೆಲಿಗ್ರಾಂ ಬಂದಿತು. ಮಾವಶಾ ಮನೆ-ಯಲ್ಲಿರಲಿಲ್ಲ. ಶಿವಣ್ಣ ಓದಿ ಹೇಳಿದ. ಅನುರಾಧಾ ಅಲ್ಲಿಯ ಪಂಜಾಬಿ ಲೆಕ್ಚರರ್‌ರೊಂದಿಗೆ ಮದುವೆ ಮಾಡಿಕೊಂಡಿದ್ದಳು. ಅಕ್ಕನ ಚಲನವಲನ-ಗಳೆಲ್ಲಾ ತಣ್ಣಗಾದವು. ಕಲ್ಲಿನಂತೆ ಸುಮ್ಮನೆ ಕುಳಿತುಬಿಟ್ಟಳು. ಎಷ್ಟೋ ಹೊತ್ತಿನ ಮೇಲೆ ನಿಧಾನವಾಗಿ ಎದ್ದು ತನ್ನ ಕೋಣೆಗೆ ಹೋದಳು. ಶಿವಣ್ಣ ಗಾಬರಿಯಾಗಿ ಅವಳ ಹಿಂದೆಯೇ ಹೋದ. ಗೌರಕ್ಕ ಮಂಚದ ಕೆಳಗಿನಿಂದ ತನ್ನ ಟ್ರಂಕು ಎಳೆದುಕೊಂಡು, ಅದರಲ್ಲಿಯ ಸಾಮಾನುಗಳನ್ನೆಲ್ಲ ಕಿತ್ತಾಡಿ ತಳದಲ್ಲಿದ್ದ ಒಂದು ಸಣ್ಣ ನೀಲಿ ರೇಶಿಮೆಯ ಅರಿವೆಯ ಗಂಟು ತೆಗೆದಳು. ಶಿವಣ್ಣ ದೂರ ನಿಂತು ಸುಮ್ಮನೆ ನೋಡುತ್ತಿದ್ದ. ಗಂಟಿನ ಮೇಲೆ ಕೈಯಾಡಿ-ಸುತ್ತ ತನ್ನಷ್ಟಕ್ಕೆ ವಟವಟ ಅನ್ನುತ್ತಿದ್ದಳು:

'ನಾ ಲಗ್ನ ಆಗಿ ಬಂದ ವರ್ಷ ಪ್ರದರ್ಶನಕ ಹೋದಾಗ ಇವರು ಪ್ರೀತಿಯಿಂದ ಈ ಕರವಸ್ತ್ರಾ ಕೊಡಿಸಿದ್ದರು. ಹಿಂದಕ ಭಾಳ ವರ್ಷದ ಹಿಂದ, ಹೋದ ಜನ್ಮದಾಗೋ ಏನೋ ಅನಸ್ತದ' ಮುಖದ ಹತ್ತಿರ ಗಂಟು ತಂದು ಮೂಸಿ ನೋಡಿದಳು. 'ಈ ಹೈದರಾಬಾದದ ಅತ್ತರ್ ಅವತ್ತ ಕೊಡಿಸಿದ್ದು' ಗಂಟು ಬಿಚ್ಚಿದಳು. ನಾಲ್ಕೈದು ಪುಟ್ಟ ಪುಟ್ಟ ರೇಶಿಮೆಯ ಅಂಗಿದಳು. ಮುತ್ತು, ಜರಿ ಕೆಲಸ ಮಾಡಿ ಗೊಂಡೆ ಕಟ್ಟಿದ ನಾಲ್ಕೈದು ರೇಶಿಮೆಯ ಕುಂಚಿಗೆಗಳು, ಅಲ್ಲದೆ ಸಣ್ಣ ಹಿತ್ತಾಳೆ ಡಬ್ಬಿಯಲ್ಲಿ ಹವಳ-ಮುತ್ತು ಕೂಡಿಸಿದ ಎರಡೆಳೆ ಬಂಗಾರದ ಸರ, ಹವಳದ ಕಿವಿ ಓಲೆ, ಪುಟ್ಟ ಪುಟ್ಟ ಬಂಗಾರದ ಬಳೆಗಳು, ಹರಳಿನ ಲಾಕೆಟ್ ಇದ್ದ ಚೈನು ಇದ್ದವು. ಎಲ್ಲವನ್ನೂ ಎತ್ತಿ, ಎತ್ತಿ ನೋಡಿ 'ಅನುರಾಧಾಗ, ಅವಳ ಕೂಸಿಗೆ ಅಂತ ಮಾಡಿಸಿದ್ದೆ. ಆದರ ಇನ್ಯಾತಕ್ಕ ಬೇಕು ಇದೆಲ್ಲಾ ಆಕೀಗೆ. ಕೊಟ್ಟರೂ ಹಾಕತಾಳೋ ಇಲ್ಲೋ ಯಾರಿಗ್ಗೊತ್ತು. ಹುಂ ಶಿವೂನ ಮಗಳಿಗೇ ಕೊಟ್ಟರಾಯ್ತು' ಎಂದು-ಕೊಳ್ಳುತ್ತ ಮತ್ತೆ ಗಂಟು ಕಟ್ಟಿ ಅವಳು ಎದ್ದಾಗ ಶಿವಣ್ಣ ಮೊದಲೇ ಹೊರಗೆ ಹೋಗಿದ್ದ.

ಫೋನಿನ ಸದ್ದು ಕೇಳಿ ಗಂಡನಿರಬೇಕೆಂದು ಗೌರಕ್ಕ ಧಾವಿಸಿ ತಾನೇ ಬಂದು ಎತ್ತಿಕೊಂಡಳು. 'ಹಲೋ' ಎಂದವಳೇ ಮತ್ತೊಂದು ಕ್ಷಣಕ್ಕೆ ಫೋನು ಇದ್ದಲ್ಲಿಯೇ ಕುಕ್ಕಿದಳು. ಆಶ್ಚರ್ಯದಿಂದ ನೋಡುತ್ತಿದ್ದ ಶಿವಣ್ಣನಿಗೆ "ಆಕೀನs ಬೋಸಡಿ. ಅವರಿಗೆ ಫೋನ್ ಮಾಡಿದ್ದಳು" ಎಂದಳು. ಅವಳ ಉತ್ತರದ ತಲೆಬುಡ ತಿಳಿಯದಿದ್ದರೂ ವಿಕಾರವಾಗುತ್ತಿದ್ದ ಅಕ್ಕನ ಮುಖ ನೋಡಿ ಶಿವಣ್ಣ ಕೂಡಲೇ ಉಪಾಯ ಹುಡುಕಿದ.

"ಗೌರಕ್ಕ, ಬಾ, ಈ ಕುರ್ಚಿ ಮ್ಯಾಲೆ ಕೂಡ್ರು" ರಟ್ಟೆ ಹಿಡಿದು ಕೂಡ್ರಿಸಿದ, "ಅನುರಾಧಾ ಲಗ್ನಾ ಮಾಡಿಕೊಳ್ಳೂದಿಲ್ಲಾ ಅಂತ ಜಗಳಾಡ-ತ್ತಿದ್ದಿ. ಈಗ ಆಯಿತೋ ಇಲ್ಲೋ ಆಕೀ ಮದುವೀ."

"ಹೂಂ ಆಯ್ತು. ಜಾತಿ ಅಲ್ಲಾ, ಕುಲಾ ಅಲ್ಲಾ. ಭಾಷಾ ಬರೂದಿಲ್ಲಾ. ಸಂಪ್ರದಾಯ ಬ್ಯಾರೇ, ಮುಂದೀನ ಕರೀಲಿಲ್ಲಾ, ಅಕ್ಕೀ ಕಾಳು ಹಾಕಲಿಲ್ಲಾ.

"ಇಂಥಾದಕ್ಕ ಮದುವೀ ಅಂತಾರೇನು ? ಕಚೇರ್‍ಯಾಗ ಹೋಗಿ ಸಹಿ ಮಾಡಿ ಬಂದದ್ದಕ್ಕ."

"ಹೌದು. ಇದು ಕಾನೂನು ಪ್ರಕಾರ ಮದುವಿ. ನಮ್ಮದು ಶಾಸ್ತ್ರದ ಪ್ರಕಾರ ಮದುವಿ. ಈಗ ಕಾಲ ಬದಲಾಗೇದ. ಹೊಸಾ ಹೊಸಾ ಪದ್ಧತಿ ಬಂದಾವ. ಅಮೇರಿಕಾ ಮತ್ತು ಇಂಗ್ಲಂಡದಾಗ ಇಲ್ಲೀಹಾಂಗ ಹಂದರಾ ಹಾಕಿ, ಸುರಗೀ ಎರದು, ಅರಿಶಿಣಾ ಹಚ್ಚಿ, ಅಕ್ಕೀಕಾಳು ಹಾಕತಾರಂತ ನೀ ತಿಳಕೊಂಡೀ ಏನು ? ಆದರ ಅದಕ್ಕೂ ಮದುವಿನs ಅಂತಾರ. ಅವರೂ ಗಂಡಾ–ಹೇಣ್ತಿ ಆಗ್ತಾರ, ಹೌದಲ್ಲೊ ?"

"ಹುಂ ಆಗತಿದ್ದಾರ ಬಿಡು. ಮುಂದೇನ ಹೇಳು."

"ಅನೂಗ ಮದುವಿ ಆತು, ಇನ್ನ ಮಗಳು ಹುಟ್ಟತಾಳ, ಆದರ ಆಕೀನ ನನ್ನ ಅಪುರಗ ಕೊಡಬೇಕು. ಹಾಂ ಈಗs ಹೇಳತೇನಿ" ಎಂದು ಶಿವಣ್ಣ ಬಾರದ ನಗು ಬರಿಸಿಕೊಂಡು ನಕ್ಕ.

ಗೌರಕ್ಕ ಅರ್ಧ ಸಿಟ್ಟಿನಲ್ಲಿ, ಅರ್ಧ ನಗುವಿನಲ್ಲಿ "ಹೂಂ ನಿಂದೊಂದು ಮಾತs, ತಾಯೀನs ನನಗ ಹೇಳದ ಮದುವಿ ಮಾಡಿಕೊಂಡಳು. ಇನ್ನ ಆಕೀ ಮಗಳು ಕೇಳತಾಳ ? ಆದರ ಅನುರಾಧಾ ಓದು ಮುಗಿದ ಮ್ಯಾಲೆ ಕೆಲಸಾ ಮಾಡತೀನಿ ಅಂತಿದ್ಲು. ಆಕೀಗೆ ಕೂಸಿನ್ನ ಜೋಪಾನ ಮಾಡಲಿಕ್ಕೆ ಬರೂ-ದಿಲ್ಲಾ. ಅದಕ್ಕ ಆಕೀ ಮಗಳ್ನ ಇಲ್ಲೇ ಇಟ್ಟಕೋತಿನಿ. ನಾನs ಬೆಳಸ್ತೇನಿ. ಅಲ್ಲಾ ನೀನs ಹೇಳು. ಪಿಯೆಚ್. ಡಿ. ಓದಿದರ ಏನಾತು ಅನೂಗ ಕೂಸಿನ್ನ ಹೆರಲಿಕ್ಕೆ ಬರ್ತದ ಅಂತ ತಿಳಕೊಂಡೀ ಏನು ?"

* * * *

ಶಿವಣ್ಣ ಅಕ್ಕನ ಮಾತು ಕೇಳಿ ತೆರೆದ ಬಾಯಿ ಮುಚ್ಚಲಿಲ್ಲ.

ಗೌರಕ್ಕ ಬಂದು ಮೂರು ತಿಂಗಳು ಕಳೆದಿತ್ತು. ಅವಳ ಆರೋಗ್ಯ ಬಹಳ ಸುಧಾರಿಸಿತ್ತು. ಜಯಾನ ಬಾಣಂತನ ಮುಗಿದ ಮೇಲೆಯೇ ಪುಣೆಗೆ ಹೋಗಬೇಕೆಂದು ನಿಂತಿದ್ದಳು. ಆಗಾಗ ಮಾಮಾನಿಗೆ ಪತ್ರ ಬರೆಯುತ್ತಿದ್ದಳು. ಆದರೆ ಅವರಿಗೆ ಉತ್ತರ ಬರೆಯಲು ಪುರಸೊತ್ತೇ ಸಿಕ್ಕುತ್ತಿರಲಿಲ್ಲ. ಅವರು

ಬರೆದ ಒಂದೇ ಒಂದು ಪತ್ರದಲ್ಲಿ 'ಅನೂಪನಿಂದ ಪತ್ರಗಳಿಲ್ಲ. ಅನುರಾಧಾ ಹನಿಮೂನ್ ಮುಗಿಸಿ ಕಾನಪುರಕ್ಕೆ ಬಂದಿದ್ದಾಳೆ. ಅಭ್ಯಾಸ ಬಾಕಿ ಬಹಳ ಉಳಿದಿದ್ದರಿಂದ ಪುಣೆಗೆ ಬರಲು ಆಗಲಿಲ್ಲವೆಂದು ವಿಷಾದಪಟ್ಟುಕೊಂಡು ಬರೆದಿದ್ದಾಳೆ. ಯಮುನಾ ಎಲ್ಲ ಕೆಲಸ ಮಾಡಿಕೊಂಡು ಹೋಗುತ್ತಾಳೆ. ನಮ್ಮ ಕಾಳಜಿ ಮಾಡಬೇಡ' ಎಂದೆಲ್ಲಾ ಬರೆದು, ಕೊನೆಗೆ ಒಂದೇ ಸಾಲಿನಲ್ಲಿ 'ಮಾಲಿನಿಯ ತಾಯಿ ತೀರಿಕೊಂಡರು, ಅವಳಿಗೆ ಬಹಳ ದುಃಖವಾಗಿದೆ' ಎಂದು ಬರೆದಿದ್ದರು. ಮಾಲಿನಿ ಯಾರೆಂದು ಶಿವಣ್ಣ ಕೇಳಿದಾಗ, ಗೌರಕ್ಕನ ದುಃಖದ ಇನ್ನೊಂದು ಮುಖದ ಪರಿಚಯ ಅವನಿಗಾಯಿತು. ಪ್ರೊ. ಮಾಲಿನಿ ಕರ್ಣಿಕ ಮೂವತ್ತೈದು ವಯಸ್ಸಾದರೂ ಮಿಸ್ ಆಗಿಯೇ ಉಳಿದಿದ್ದಾಳೆಂದೂ ಮಾಮಾನಿಗೆ, ಅವಳಿಗೆ ಒಂದು ಮೀಟಿಂಗಿನಲ್ಲಿ ಪರಿಚಯವಾಗಿ, ಈಗ ಇಬ್ಬರ ಸ್ನೇಹ ಗಾಢವಾಗುತ್ತ ನಡಿದಿದೆ ಎಂದೂ ಹೇಳಿ ಗೌರಕ್ಕ ಮಾಲಿನಿಗೆ ಹಿಡಿಶಾಪ ಹಾಕಿದಳು.

ಮುಂದೆ ಒಂದು ತಿಂಗಳು ಕಳೆದಿರಲಿಲ್ಲ. ಅಕ್ಕನ ಶಂಕೆ ನಿಜವಾಯಿತು. ಮಾಮಾನ ಪತ್ರ ಶಿವಣ್ಣನಿಗೆ ಬಂದಿತು.

'ಪ್ರಿಯ ಶಿವಣ್ಣ,

ನಿನ್ನೆ ನಾನು, ಡಾ. ಮಾಲಿನಿ ಕರ್ಣಿಕ ಜೊತೆಗೆ ರಿಜಿಸ್ಟರ್ಡ್ ಲಗ್ನ ಮಾಡಿ-ಕೊಂಡೆ. ಅವಳು ನನ್ನ ಬೌದ್ಧಿಕ ಜೀವನಕ್ಕೆ ಸರಿಯಾದ ಸಂಗಾತಿ: ನಾನು ಚೆನ್ನಾಗಿ ವಿಚಾರ ಮಾಡಿಯೇ ಈ ನಿರ್ಧಾರ ತೆಗೆದುಕೊಂಡಿದ್ದೇನೆ. ಈ ವಿಷಯದಲ್ಲಿ ನಿನ್ನ ಅಕ್ಕನಿಂದ ಯಾವ ಅಡ್ಡಿ–ಆತಂಕಗಳು ಬರುವದಿಲ್ಲವೆನ್ನು-ವದೂ ನನಗೆ ಗೊತ್ತು. ಅವಳಿಗೆ ಯಾವದಕ್ಕೂ ನಾನು ಕಡಿಮೆ ಮಾಡುವು-ದಿಲ್ಲ. ಅವಳು ಇಷ್ಟಪಟ್ಟರೆ ಬಂದು ಪುಣೆಯ ಮನೆಯಲ್ಲಿ ಇರಬಹುದು ಅಥವಾ ನಿನ್ನ ಜೊತೆಗೇ ಇರಬಯಸಿದರೆ ಅವಳಿಗೆ ತಿಂಗಳಿಗೆ ಮುನ್ನೂರು ರೂಪಾಯಿ ಖರ್ಚಿಗೆ ತಪ್ಪದೇ ಕಳಿಸುವೆ. ಅವಳನ್ನು ಕೇಳಿ ಉತ್ತರ ಬರೆ. ಅವಳ ಇಷ್ಟಕ್ಕೇ ಬಿಟ್ಟಿರುವೆ.

ನಿನ್ನ,

ಮಾಮಾ

ಪತ್ರ ಓದಿದ ಗೌರಕ್ಕ ಅದನ್ನು ಹರಿದು ಚೂರು ಚೂರು ಮಾಡಿ, ಮುಷ್ಟಿಯಲ್ಲಿ ಹಿಡಿದು ಹಿಚುಕಿ ಮುಖ ಮುಚ್ಚಿಕೊಂಡು ಅಳಹತ್ತಿದಳು. ಅವಳ ಕಣ್ಣೀರು ಹರಿಯುಗೊಟ್ಟು ಶಿವಣ್ಣ ಪುಟ್ಟ ಅಂಜನಾಳನ್ನು ಎತ್ತಿ ಒಯ್ದು ಅವಳ ಉಡಿಯಲ್ಲಿಟ್ಟ. ಕೂಸನ್ನು ಎತ್ತಿ ಎದೆಗವಚಿಕೊಂಡ ಗೌರಕ್ಕ ದೃಢವಾದ ದನಿಯಲ್ಲಿ ಹೇಳಿದಳು,

"ಶಿವೂ, ಈ ಪತ್ರಕ್ಕ ಉತ್ತರ ಬರೀಬ್ಯಾಡಾ."

* * *

# ಕ್ಯಾನ್ಸರ್

ಪಡಸಾಲೆಯ ಕಟ್ಟೆಯ ಮೇಲೆ ಹಾಕಿದ್ದ ಹೊರಸಿನ ಮೇಲೆ ಒಂದು ಅರಿವೆಯ ಗಂಟಿನಂತೆ ಮುದುಡಿ ಮುದುಡಿಯಾಗಿ ಮಲಗಿದ್ದ ಶಿವಣ್ಣನ ಹತ್ತಿರ ಬಂದಳು ಬಸವ್ವ.

"ತಮ್ಮಾ, ಏ ಶಿವಣ್ಣಾ"

ಕೌದಿಯ ಮುಸುಕು ಬಿಗಿದ ಶಿವಣ್ಣ ಮಿಸುಕಲಿಲ್ಲ. ಬಸವ್ವ ಅಷ್ಟಕ್ಕೆ ಬಿಡುವವಳೇ ? ಒಂದು ಕೈಯಲ್ಲಿ ಪತ್ರ ಹಿಡಿದು, ಇನ್ನೊಂದು ಕೈಯಿಂದ ಅಲುಗಾಡಿಸುತ್ತ ದೈನಾಸಬಟ್ಟಳು: "ಶಿವೂ, ಏಳಪ್ಪಾ, ಕಾಗದಾ ಬಂದೈತಪ್ಪಾ ಕೊಪ್ಪದಿಂದ ಬಂದಾಂಗ ಕಾಣತದ. ನಿನ್ನ ಮಾವಂದs ಇರಬೇಕು. ಒಂದೀಟು ಓದಿ ಹೇಳೋಯಪ್ಪಾ."

ಗಂಟಿಗೆ ಜೀವ ಬಂದಿತು. ಒಂದೊಂದಾಗಿ ಕೈ, ಕಾಲು, ಮುಖ ಹೊರಗೆ ಬಂದವು. ಅವ್ವನ ಕೈಯಿಂದ ಕಾಗದ ಇಸಿದುಕೊಂಡು, ಮುಖಕ್ಕೆ ಹಿಡಿದ. ಬೆಳಕು ಸಾಲದ್ದರಿಂದ ಅಕ್ಷರಗಳು ಸ್ಪಷ್ಟವಾಗಲಿಲ್ಲ. ನರಳುತ್ತಲೇ ಕೈ ಊರಿ ಎದ್ದ. ಅವ್ವ ಆಧಾರ ಕೊಟ್ಟಮೇಲೆ ಪಡಸಾಲೆಯ ಬಾಗಿಲಿಗೆ ಬಂದು ನಿಂತು ತನ್ನಷ್ಟಕ್ಕೇ ಪತ್ರ ಓದಿಕೊಂಡ.

ಮೊದಲೇ ಬೆಳ್ಳಗಾಗಿದ್ದ ಮುಖ ಮತ್ತಷ್ಟು ಬಿಳಿಚಿಕೊಂಡಿತು. ಬಾಗಿಲ ಚೌಕಟ್ಟು ಹಿಡಿದವ ಅಲ್ಲಿಯೇ ಕುಸಿದು ಕುಳಿತು, ಮುಖ ಮುಚ್ಚಿಕೊಂಡ. ಅವ್ವ ಹತ್ತಿರವಿರದಿದ್ದರೆ ಬಿದ್ದೇಬಿಡುತ್ತಿದ್ದನೇನೋ ! ಬಸವ್ವ ಎಷ್ಟೋ ಸಲ ರಮಿಸಿ ಯಪ್ಪಾ, ಯಣ್ಣಾ ಎಂದು ಕೇಳಿಕೊಂಡ ಮೇಲೆ ನಿಧಾನವಾಗಿ ಪತ್ರ ಓದಿದ.

ಮಗನ ಬಾಯಿ, ತುಟಿಗಳನ್ನೇ ಕಣ್ಣರಳಿಸಿ ಆಶ್ಚರ್ಯದಿಂದ ನೋಡು-ತ್ತಿದ್ದ ಬಸವ್ವ, ಒಮ್ಮೆಲೇ ಮನೆಯ ಸೂರು ಹಾರಿ ಹೋಗುವ ಹಾಗೆ ಒದರಿದಳು—

“ಏನಂತಾನ ಅಂವಾ, ನಿನ್ನ ಮಾವ ಅನ್ನಿಸಿ ಕೊಂಡಾಂವ ? ನಾಕ ಮಂದಿ ಹಿರೇರ ಮುಂದ ಮಾತ ಮುಗಿಸಿ, ನನ್ನ ಕೊಳ್ಳಾಗಿನ ಗುಂಡಿನ ಟಿಕ್ಕಿ, ಟೋಪ ಸೆರಗಿನ ಸೀರಿ ಹಾಕಿ, ಸಕ್ಕರಿ ಕಾರಣಾ ಮಾಡಿ ಬಂದೀನಿ. ಈಗೇನ ಧಾಡಿ ಬಂತ ಇಂವಗ. ನಾಕ ದಿನಾ ಜಡ್ಡಾಗಿ ಮಲಗಿದರ ಏನಾತು ? ಜಗತ್ತಿನ್ಯಾಗ ಬ್ಯಾನಿ ಯಾರಿಗೂ ಬರೂದಿಲ್ಲೇನ ? ನನ್ನ ಮಗ್ಗ ಆರಾಮ ಆಗೂ ಜಡ್ಡ ಅಲ್ಲಂತ ಯಾವ ಊರ ಶಾಣ್ಯಾ ಹೇಳಿದ ಇಂವಗ ? ಮಗಳು ಬ್ಯಾನೀ ಗಂಡನ್ನ ಒಲ್ಲೆ ಅಂತಾಳಂತ ಕಾಗದಾ ಬರಸಾಕ ನಾಚಿಕೆ ಬರೂದಿಲ್ಲೇನ ಈ ಹೆಂಗಸ್ಯಾಗ. ಜಿಪ್ಪರಿ ಹಿಡಿದ, ಮೈಹುಳೇ ಜಜ್ಜಿ ಮಗಳಿಗೆ ಬುದ್ಧೀ ಕಲಸಬೇಕೋ, ಏನ ಆಕೀ ಹೇಳಿದಾಂಗ ಕುಣಿಬೇಕೋ? ನನ್ನ ಮಗ್ಗ ದೇಸದಾಗ ಹೆಣ್ಣ ಕೊಡಾವರ ಸಿಗತಿದ್ದಿಲ್ಲೇನ ? ಕಾಲ ಬಿದ್ದ ಕೊಡತಿದ್ದರು. ಕಳ್ಳಿನ್ಯಾಗಿಂದ ಅಂತ ಅಣ್ಣನ ಮಗಳ್ನ ಮಾಡಿದರ, ಈಗ ಕೊಡುದಿಲ್ಲ ಅಂತಾನ ಲುಚ್ಚಾ. ಎಷ್ಟ ಸೊಕ್ಕ ಬಂದsದ ಇವಂಗ. ಇರಲಿ ಮಾಡ್ತೀನಿ ಅಂವಗ. ಮನ್ಯಾಗ ಹಿರ್‍ಯಾ ಸತ್ತಾನ ಅಂದಪ್ಪಕ್ಕ ಊರಾಗಿನ ಹಿರ್‍ಯಾರು ಇಲ್ಲೇನು ?”

ಅವ್ವನ ಆರ್ಭಟ ಕೇಳಿ ಹಿತ್ತಲಲ್ಲಿದ್ದ ನೀಲಕ್ಕ ಓಡಿಬಂದಳು. ಅಣ್ಣನ ಗೋಣು ಸೊಟ್ಟಗಾಗಿದ್ದು ನೋಡಿ “ಯವ್ವಾ, ಬೇ ಯವ್ವಾs ಅಣ್ಣನ ನೋಡಿಲ್ಲ ಮಾರಿ ಹ್ಯಾಂಗ ಮಾಡ್ಯಾನ” ಎನ್ನುತ್ತ ಶಿವಣ್ಣನನ್ನು ಹಿಡಿದೊಡನೆ ಅವಳ ಮೇಲೆಯೇ ಬಿದ್ದುಬಿಟ್ಟನವ. ಇಬ್ಬರೂ ಕೂಡಿ ಅವಸರ ಮಾಡಿ ಅವನನ್ನು ಎತ್ತಿ ಒಯ್ದು ಮತ್ತೆ ಹೊರಸಿನ ಮೇಲೆ ಮಲಗಿಸಿದರು.

ಹೌಹಾರಿ ಎದೆ ಬಡಿದುಕೊಂಡು ಅವ್ವ ಅಳುತ್ತಿರುವಾಗ ಚಿಕ್ಕವಳಾದರೂ ಹೆಚ್ಚು ಧೈರ್ಯವಿದ್ದ ನೀಲಕ್ಕ ಒಳಗೆ ಓಡಿ, ಒಲೆಯ ಬಿಸಿಬೂದಿ ತಂದು ಅಣ್ಣನ ಅಂಗಾಲು ತಿಕ್ಕಲು ಅವ್ವನಿಗೆ ಹೇಳಿ, ತಾನು ಉಳ್ಳಾಗಡ್ಡಿ ಜಜ್ಜಿ ತಂದು ಅವನ ಮೂಗಿಗೆ ಹಿಡಿದಳು. ಅದರ ಘಾಟಿಗೆ ಮುಖ ಅತ್ತಿತ್ತ ಹೊರಳಿಸುತ್ತ ಕಣ್ಣು ತೆರೆದ ಶಿವಣ್ಣ.

“ಏ ಯಪ್ಪಾ ಶಿವಣ್ಣಾ, ಒಂದೀಟು ಬಾಯಿ ತಗಿ. ‘ಆ’ ಅನ್ನು. ಹಣಮಂತ ದೇವರ ಪೂಜಾರಪ್ಪ ಆಕಳ ಹಾಲು ಆಮಂತ್ರಿಸಿ ಕೊಟ್ಟಾನ, ಕುಡಿ

ಇದನ್ನ ಹೊಟ್ಟಾಗ ಸಮಾಧಾನ ಆಕ್ಕೈತಿ. ತಿಪ್ಪಾಭಟ್ಟರು ಭಾಳ ಶಾಣ್ಯಾರು ಅದಾರ. ಏನೇನೋ ಮಂತ್ರಾ ಭಾಳ ಹೇಳತಾರ. ಇದನ್ನ ಕುಡದರ ಎಂಟ ದಿನದಾಗ ಎದ್ದು ಕೂಡತಾನ ನಿನ್ನ ಮಗಾ ಅಂದಾರ. ಹಾಂಗs ಆಗಲೆಪ್ಪ, ನಿನ್ನ ಬಾಯಿ ಹರಕಿಂದ ನನ್ನ ಮಗ್ಗ ಗುಣಾ ಅದರ ಹಣಮಪ್ಪಗ ಬೆಳ್ಳಿ ಮೀಸಿ ಮಾಡಿಸಿ ಕೊಡ್ತೀನಿ ಅಂತ ಬೇಡಿಕೊಂಡೀನಿ."

ಬಸವ್ವ ಮಾಡಿಸಿಕೊಟ್ಟ ಬೆಳ್ಳೀಮೀಸಿ ಇಟ್ಟುಕೊಳ್ಳುವ ಭಾಗ್ಯ ಹಣಮಪ್ಪನಿಗೆ ಬರಲೇ ಇಲ್ಲ. ಎಂಟು ದಿನ ಬಿಟ್ಟು, ಹದಿನೈದು ದಿನ ಹಾಲು ಕುಡಿದರೂ ಏನೂ ಗುಣ ಕಾಣಲಿಲ್ಲ. ರಂಗವ್ವನ ಸೊಸೆಯು ತವರೂರಿನಲ್ಲಿ ಫಕ್ಕೀರ ಸಾಬನ ಗೋರಿ ಇದೆ. ಅದಕ್ಕೆ ಹನ್ನೊಂದು ಅಮವಾಸ್ಯೆ ನಡೆದು-ಕೊಂಡರೆ ಎಂಥಾ ಜಡ್ಡು ಇದ್ದರೂ ಹಾರಿ ಹೋಗುತ್ತದೆಂದು ರಂಗವ್ವ ಹೇಳಿದಳು. ನುಗನಿಗೆ ಹಾಸಿಗೆ ಬಿಟ್ಟು ಏಳಲೂ ಆಗುತ್ತಿರಲಿಲ್ಲವಾದುದರಿಂದ ಬಸವ್ವ ಅಮವಾಸ್ಯೆಗೊಮ್ಮೆ ತಾನೇ ಹೊರಟಳು.

ಹೊಟ್ಟೆಯಲ್ಲಿ ಸಾವಿರಾರು ಸೂಜಿಗಳನ್ನು ಒಮ್ಮೆಲೇ ಚುಚ್ಚಿದಷ್ಟು ನೋವು ಶಿವಣ್ಣನಿಗೆ. ಉರಿ, ಸಂಕಟ, ನವೆತ ಎಲ್ಲ ಅನುಭವವೂ ಒಟ್ಟಿಗೇ. ಎರಡೂ ಕೈಗಳಿಂದ ಹೊಟ್ಟೆ ಕಿವಿಚುತ್ತ, ಅತ್ತಿತ್ತ ಹೊರಳಾಡುತ್ತ ಶಿವಣ್ಣ 'ಯವ್ವಾ' 'ಯವ್ವಾ' ಎಂದು ವಿಲಿವಿಲಿ ಒದ್ದಾಡಿದ.

ಅಡಿಗೆ ಮನೆಯಿಂದ ನೀಲಕ್ಕ ಓಡಿಬಂದಳು. "ಯಣ್ಣಾs ಅವ್ವ ಇವತ್ತ ಮಣಗಾಂವಿಗೆ ಹೋಗ್ಯಾಳ, ಫಕ್ಕೀರ ಸಾಬನ ಸಮಾಧಿಗೆ. ಇವತ್ತು ಅವಾಸಿ ಅಲ್ಲೇನು ? ಕರೆವ್ವಗ ಎಡಿ ಕೊಡಾಕ, ಬ್ಯಾಳಿಗೆ ಹಾಕಾಕ ನನಗ ಹೇಳ್ಯಾಳ, ಹೂರಣಾ ತಿರವಾಕ ಕುಂತೇನಿ ! ನಿನಗ ಏನರೆ ಬೇಕಾಗಿತ್ತೇನ ?"

ಏನೂ ಬೇಡವೆಂದು ಗೋಣು ಅಳ್ಳಾಡಿಸಿದ ಅಣ್ಣನನ್ನು ನೋಡಿ ನೀಲಕ್ಕ ಸಮಾಧಾನದಿಂದ ಮತ್ತೆ ತನ್ನ ಕೆಲಸಕ್ಕೆ ನಡೆದಳು. ಸ್ವಲ್ಪ ಹೊತ್ತು ಜೋರಾಗಿದ್ದ ಹೊಟ್ಟೆನೋವು ನಿಧಾನವಾಗಿ ಕಡಿಮೆ ಆದಂತೆ, ನಿಷ್ಕ್ರಿಯನಾಗಿ ಬಿದ್ದುಕೊಂಡಿದ್ದ ಶಿವಣ್ಣನ ಮಿದುಳು ಚುರುಕಾಯಿತು.

ಅವ್ವ ಫಕ್ಕೀರ ಸಾಬನ ಗೋರಿಗೆ ಹೋಗಾಕ ಹತ್ತಿ ನಾಕ ಅವಾಸಿ ಆದವು. ದಾದಾಪೀರ ಮಂತ್ರಿಸಿ ಕೊಟ್ಟ ನಿಂಬೆಹಣ್ಣು, ಸಕ್ಕರಿ ತಂದು

ಪಾನಕಾ ಮಾಡಿ ನನಗ ಕುಡಸ್ತಾಳ, ಧೂಪಾಹಾಕಿ ಹೋಗಿ ನನ್ನ ಮಾರಿಗೆ ಊದತಾಳ. ಆದರ ದಿನ ದಿನಕ ನನ್ನ ಹೊಟ್ಟೆನೋವು ಕಡಿಮಿ ಆಗೂದು ಬಿಟ್ಟು ಹೆಚ್ಚs ಆಗಾಕ ಹತ್ತೇತಿ. ಈಶ್ವರಯ್ಯನ ಹಸರು ತೊಪ್ಪಲ ರಸಾ ಕುಡ್ಸಿದ್ಳು. ಕುರುಬ ರಾಮನ ನಾರು–ಬೇರು ತಿನಿಸಿದ್ಳು. ಪಂಡಿತರ ಬಸ್ಮಾ ನೆಕ್ಕಸಿದ್ಳು. ತನ್ನ ಕೈಲಾದ್ದೆಲ್ಲಾ ಮಾಡಾಕ ಹತ್ತ್ಯಾಳ. ಆಗಲೆ ನಾ ಹಾಸಿಗಿ ಹಿಡಿದು ದೀಡ ತಿಂಗಳಾತು. ನಾನು ಭಾಳ ಸಾರೆ ಕೇಳಿದೆ. 'ಬೇ ಯವ್ವಾ ನನ್ನ ಡಾಕ್ಟರಿಗೆ ತೋರಸಬೇಕs. ಹೊಟ್ಟ್ಯಾಗ ಹುಣ್ಣು-ಗಿಣ್ಣು ಆಗಿರಬೇಕು. ಅದಕ್ಕ ನೂವಾಗ್ತತಿ. ಅವರು ಕೊಯ್ದು ತಗೀತಾರ, ಅರಾಮು ಆಕ್ತೈತಿ, ಅಂತ. ಆದರ ಕಿಂವ್ಯಾಗ ಹಾಕ್ಕೊಳ್ಳೋವೊಲ್ಲಳು. ಛೀ, ಬಿಡ ತಮ್ಮಾ, ಡಾಕ್ಟರಿಗೆ ತೋರಸೂದು ಬ್ಯಾಡಾ. ಹೊಟ್ಟೀ ಕೊಯ್ಸದು ಬ್ಯಾಡಾ. ದುಡಿಯೂ ಗಂಡಸ ಮಗಾ ನೀನು. ನಾಳೆ ಅದ್ದರ ಅಗಿ ಕುಂತಿ ಅಂದರ ಹೊಲದಾಗ ದುಡ್ಯಾಂವ ಹ್ಯಾಂಗ—ಅಂತಾಳ. ಹಾಸಿಗಿ ಬಿಟ್ಟ ಏಳಾಕ ಆಗವೊಲ್ಲದು. ದುಡಿಯೂದು ದೂರದ ಮಾತು. ನಾ ಅರಾಮಾಗಿ ಏಳ್ತೀನೋ, ಇಲ್ಲಾs ಹಿಂಗs ಹಾಸಿಗಿ ಹಿಡದ ಸಾಯ್ತೀನೊ ಯಾರಿಗೆ ಗೊತ್ತು? ಎಂಟ ದಿನಾ ಆತ, ಅನ್ನಾ ಬಸದ ಗಂಜಿ, ಮಜ್ಜಿಗ ಮ್ಯಾಲೆ ಅದೀನಿ. ಅದಕ್ಕ ಸಗತೀ ಹ್ಯಾಂಗ ಬರಬೇಕ ಮೈಯಾಗ. ಡಾಕ್ತರ ಕಡೆ ಹೋದರ ಸಗತೀ ಗುಳಿಗೀ ಕೊಡತಾರ. ಇಂಜೆಶನ್ ಚುಚ್ಚತಾರ, ಅರಾಮು ಆದೀತೋ ಏನೋ ಅನಸ್ತೇತಿ. ಆದರ ಈ ಹಟಮಾರಿ ಅವ್ವಗ ಹೇಳುವವರು ಯಾರು ? ನಮ್ಮಪ್ಪನ ಮಾತs ಕೇಳ-ತಿದ್ದಿಲ್ಲಾ, ಇನ್ನ ನನ್ನ ಮಾತ ಕೇಳತಾಳ?

ನನಗ ಹೆಣ್ಣು ತರೂ ಮುಂದ, ನಾ ಎಷ್ಟ ಚಾಲವರದೆಯವ್ವಾ, ನನಗ ಆ ಹುಡುಗಿ ಬ್ಯಾಡಾ. ಆಕಿನ್ನ ಗಟ್ಟಿ ಮಾಡಾಕ ಹೋಗಬ್ಯಾಡಾ ಅಂತ. ನನಗ ಮೊದಲs ಗೊತ್ತಾಗಿತ್ತು. ಅವರ ಊರ ಪೈಲವಾನ ಯಮುನ್ಯಾನ ಮ್ಯಾಲೆ ಆಕೀ ಮನಸ್ಸು ಐತಿ ಅಂತ. ನನ್ನ ಗೆಣ್ಯಾ ಗಂಗಪ್ಪ ಹೇಳಿದ್ದ ನನಗ. ಅಟ್ಟಾದರೂ ಬಿಡಲಿಲ್ಲ ನಮ್ಮವ್ವ. ಟಿಕ್ಕೆ, ಸೀರಿ ಕೊಟ್ಟು ಆಕಿನ್ನ ಗಟ್ಟಿಮಾಡೇ ಬಂದ್ಳು. ನಾ ಹಾಸಿಗಿ ಹಿಡಿದಮ್ಯಾಲೆ ನಮ್ಮ ಮಾವ ಒಂದು ಸಾರೆ ಬಂದು ಹೋದಾ. ನಮ್ಮತ್ತಿ, ಮಾಡಿಕೊಳ್ಳೂ ಹುಡುಗಿ ಇಬ್ಬರಿಗೂ ಈ ಮದುವಿ ಮನಸ್ಸಿಗೆ ಬಂದಿದ್ದಿಲ್ಲಾ. ಇಬ್ಬರೂ ಇತ್ಲಾಗ ಹಣಿಕಿ ಹಾಕಲಿಲ್ಲಾ. ಅಷ್ಟs

ಅಲ್ಲಾ, ಕಡೀಕ ಪಂಚರ ಮುಂದ ವಸ್ತ್ರಾ, ಸೀರಿ ತಿರಿಗಿ ಕೊಟ್ಟು ಸಂಬಂಧಾ ಬಿಡಿಸಿಕೊಂಡು ಬಿಟ್ರು. ಅವ್ವ ಗಂಟಲು ಹರಿಯೂಹಾಂಗ ಅವರ ವಂಶಾವಳಿ ಎಲ್ಲಾ ಬೈದಾಡಿ ಕಡೀಕ ಥಣ್ಣಗಾದಳು. ಆದರ ಈ ಅಪಮಾನಾ, ಸಂಕಟ ಆದದ್ದೆಲ್ಲಾ ನನಗs ಮತ್ತ. ಒಬ್ಬನs ಮಗಾ ಅಂತ ಭಾಳ ಪಿರೀತಿ ಮಾಡ-ತಾಳ ಅವ್ವ. ನಾನು ನೆಳ್ಳಿದರ, ಅತ್ತರ, ತಾನೂ ಬೋರ್ಯಾಡಿ ಅಳತಾಳ. ಹರದಾರಿ ನೆಲಾ ನಡದು ಹೋಗಿ ಫಕ್ಕೀರ ಸಾಬಗ ನಡಕೊಂಡು ಪರಸಾದಾ ತರತಾಳ. ಆದರ ಈ ಪರಸಾದ ನನಗ ಗುಣಾ ಮಾಡೂದಿಲ್ಲ ಅನ್ನೂದs ಇಕೀಗೆ ತಿಳೀವೊಲ್ಲದಾಗೇದ.

'ಆಂss' ಎಂದು ಚೀರಿಬಿಟ್ಟ ಶಿವಣ್ಣ. ಈಗ ಮತ್ತೆ ಹೊಟ್ಟೆಯಲ್ಲಿ ಕಳೆ ಬರತೊಡಗಿತ್ತು. ರುಬ್ಬುಗುಂಡು ಬಿಟ್ಟು ನೀಲಕ್ಕ ಓಡಿ ಬಂದಾಗ ಶಿವಣ್ಣ ತೇಲುಗಣ್ಣು ಹಾಕಿ ನಿಶ್ಚಲನಾಗಿದ್ದ. ಗಾಬರಿಯಾದ ನೀಲಕ್ಕ ಓಣಿಗೆ ಓಡಿ ಬಂದು ಯಾರ್‍ಯಾರನ್ನೊ ಕರೆದಳು, ಅಂಗಲಾಚಿದಳು. ಅಣ್ಣ ಹ್ಯಾಂಗ್ಯಾಂಗೋ ಮಾಡ್ತಾನಾ ಬರ್‍ರೆವ್ವಾ, ಸಂಗವ್ವಕ್ಕಾ, ಮಲ್ಲವ್ವs ಎಂದು ಬೊಬ್ಬೆ ಹಾಕಿದಳು. ಗುಬು ಗುಬು ಜನ ಬಂದರು, ಕೂಡಿದ ಜನರಲ್ಲಿ ಹತ್ತಿರ ಬಂದು ಕುಳಿತು ಶಿವಣ್ಣನ ನಾಡಿ ಹಿಡಿದು ನೋಡಿದವಳು ಹೊಲಿಗೆ ಅಕ್ಕವರು, ರಮಾ ತಾಯಿಯೇ ಯಾರನ್ನೋ ಕರೆದು ಪಾಟೀಲ ಡಾಕ್ಟರರನ್ನು ಕರೆಯಲು ಹೇಳಿ-ದಳು. ಅಣ್ಣನ ಮುಖ ನೋಡಿ ಸತ್ತೇ ಹೋದನೆಂದು ದುಃಖ ಪಡುತ್ತಿದ್ದ ನೀಲಕ್ಕ ಅದಕ್ಕ ಬೇಡವೆನ್ನಲಿಲ್ಲ. ಡಾಕ್ಟರರು ಬಂದು ಇಂಜೆಕ್ಷನ್ ಚುಚ್ಚಿದ ಮೇಲೆಯೇ ಶಿವಣ್ಣ ಮೆಲ್ಲಗೆ ಕಣ್ಣು ತೆರೆದ. ಅವನನ್ನು ಪೂರ್ತಿಯಾಗಿ ತಪಾಸುಮಾಡಿ ವಿವರ ತಿಳಿದುಕೊಂಡ ಪಾಟೀಲರು,

"ಇವನ ಹೊಟ್ಟೆಯ ಎಕ್ಸರೇ ಫೋಟೋ ತಗೀಬೇಕು. ಅಮ್ಯಾಲೆ ಆಪರೇಶನ್ನೂ ಮಾಡಬೇಕಾಗುತ್ತದೋ ಏನೋ. ಅದಕ್ಕೆಲ್ಲಾ ಇಲ್ಲೆ ಅನುಕೂಲ ಇಲ್ಲಾ. ಧಾರವಾಡಕ್ಕ ಕರಕೊಂಡು ಹೋಗ್ರಿ" ಎಂದು ಹೇಳು-ತ್ತಿರುವಾಗ ಬಸವ್ವ ಜನರನ್ನು ಸರಿಸುತ್ತ ಒಳಗೆ ಬಂದಳು.

ಸವಾರಿ ಚಕ್ಕಡಿ ಕಟ್ಟಿಸಿಕೊಂಡು ಬಂದ ಕರಿಯಣ್ಣನೊಡನೆ ಅವ್ವ, ಮಗಳು ಶಿವಣ್ಣನನ್ನು ಧಾರವಾಡಕ್ಕೆ ಒಯ್ದರು. ಕರಿಯಣ್ಣ ದೂರದ

ಸಂಬಂಧದಲ್ಲಿ ಬಸವ್ವನಿಗೆ ಅಳಿಯನಾಗಬೇಕು. ನಾಲ್ಕೆಕರೆ ಗದ್ದೆ, ಅಣ್ಣ-ತಮ್ಮ ಇಬ್ಬರೇ. ತಮ್ಮನಿಂದ ಹೊಲದ ಕೆಲಸ ಮಾಡಿಸುತ್ತ ಕರಿಯಣ್ಣ ಬಿಳಿ ಅರಿವೆ ಹಾಕಿಕೊಂಡು ದೊಡ್ಡ ಮನುಷ್ಯರಂತೆ ಊರಿನಲ್ಲಿ ಕಾರಭಾರ ಮಾಡುತ್ತ ಮೆರೆದಾಡುತ್ತಿದ್ದ. ಎರಡು ಮಕ್ಕಳನ್ನು ಬಿಟ್ಟು ಅವನ ಮೊದಲ ಹೆಂಡತಿ ಸತ್ತಿದ್ದಳು. ಇವನ ಕಾಟ ತಾಳಲಾರದೆ ಅವಳು ಸತ್ತಳು ಎಂದು ಜನ ಆಡಿ-ಕೊಳ್ಳುತ್ತಿದ್ದರು. ಊರಿನ ಚಂಡಾಳ–ಚೌಕಡಿಗಳಿಗೆಲ್ಲ ನಾಯಕನು ಅವನೇ. ಲಕ್ಷಣವಾಗಿದ್ದ ಹುಡುಗಿಯರ ಮೇಲೆಲ್ಲ ಇವನ ಕಣ್ಣು. ನೀಲಕ್ಕನನ್ನು ತನಗೆ ಕೊಡಬೇಕೆಂದು ಬಸವ್ವನಿಗೆ ಹೇಳಿಯೂ ಕಳಿಸಿದ್ದ. ಬಸವ್ವನಿಗೇನೋ ಕರಿಯ-ನಂಥ 'ಗಂಡಸು' ಮಗನನ್ನು ಅಳಿಯನನ್ನಾಗಿ ಮಾಡಿಕೊಳ್ಳುವ ಮನಸ್ಸಿತ್ತು. ಆದರೆ ತಮ್ಮ ನೆರೆಮನೆಯ ಸಿದ್ದಿಯ ಜೊತೆಗೆ ಹಿತ್ತಿಲ ಬಾವಿಯ ಕಟ್ಟೆಯ ಮೇಲೆ ಸರಸ ಸಲ್ಲಾಪ ಮಾಡುತ್ತಿದ್ದ ಕರಿಯನನ್ನು ಆಗಾಗ ನೋಡುತ್ತಿದ್ದ ನೀಲಕ್ಕ ಮಾತ್ರ ಹಾರಾಡಿದ್ದಳು. ಅವನಿಗೆ ತನ್ನನ್ನು ಕೊಟ್ಟರೆ ಹಿತ್ತಿಲ ಬಾವಿ ಬೀಳುತ್ತೇನೆಂದು ಅವ್ವನಿಗೆ ಹೆದರಿಕೆ ಹಾಕಿದ್ದಳು. ನೀಲಕ್ಕ ಶಿವಣ್ಣನಷ್ಟು ಮೆದುಗಿ ಅಲ್ಲ. ಹೆಣ್ಣಾದರೂ ಸೆಟೆದು ನಿಲ್ಲುವವಳು. ಅಂತೆಯೇ ಧಾರವಾಡ-ದಲ್ಲಿ ನಾಲ್ಕಾರು ದಿನ ಇರಬೇಕಾಗಿ ಬಂದಾಗ ಕರಿಯನಿಂದ ಆದಷ್ಟು ದೂರ-ವಾಗಿ, ಎಚ್ಚರಿಕೆಯಿಂದ ಇದ್ದಳು.

ಧಾರವಾಡದ ಸರ್ಜನರು ಶಿವಣ್ಣನನ್ನು ಎಲ್ಲ ತರದಿಂದಲೂ ಪರೀಕ್ಷೆ ಮಾಡಿ ನೋಡಿದರು. ಕೊನೆಗೆ ಇದು ಕೈಬಿಟ್ಟ ಕೇಸು, ಅಪರೇಶನ್ನಿನಿಂದ ಏನೂ ಫಾಯದೆ ಇಲ್ಲವೆಂದು ತಿಳಿದು ತಿರುಗಿ ಊರಿಗೆ ಕಳಿಸಿದರು.

ಮಗನನ್ನು ತಿರುಗಿ ಊರಿಗೆ ಕರೆದಂದ ಬಸವ್ವ, ಗಂಟಲೆತ್ತಿ ಜೋರಾಗಿ ಕೂಗಾಡಿದಳು. "ಆ ಹೊಲಗಿ ಕಲಸೂ ಬೋಸಡಿ ನನ್ನ ಮಗನ್ನ ಡಾಕ್ಟರ ಕೈಯಾಗ ಕೊಟ್ಟು, ಅವನ ಮಾತು ಕೇಳಿ ಮಗನ್ನ ಕಟಿಗೊಂಡು ಊರೂರು ತಿರುಗಿ ಬಂದೆ ಹುಚ್ಚನಾಯಿ ಹಾಂಗ. ನನಗ ಮೊದಲs ಗೊತ್ತಿತ್ತು ಈ ಡಾಕ್ಟರಿಗೆ ಏನೇನೂ ತಿಳಿಯೂದಿಲ್ಲ ಅಂತ. ಇಲ್ಲೇ ಇದ್ದರ ನನ ಮಗಾ ಆರಾಮ ಇರತಿದ್ದಾ."

ಕ್ಯಾನ್ಸರಿನಿಂದ ಆಗಲೇ ಮೂರು ತಿಂಗಳು ಬಳಲಿದ್ದ ಶಿವಣ್ಣನ ಆಯುಂಸ್ಸು ಇನ್ನು ದಿನ ಎಣಿಸುವಷ್ಟು ಮಾತ್ರ ಉಳಿದಿತ್ತು. ಶಿವಣ್ಣನ ನಿಜವಾದ ಪರಿಸ್ಥಿತಿ ತಿಳಿದ ನೀಲಕ್ಕ ಬಿಕ್ಕಿ ಬಿಕ್ಕಿ ಅತ್ತಳು.

* * *

"ಬಸವ್ವಕ್ಕಾs ಅದಿಯೇನಬೇ" ಎನ್ನುತ್ತ ಒಂದು ಸಂಜೆ ಕರಿಯ ಮನೆಯ ಒಳಗೆ ಬಂದ. ಅವನೊಡನೆ ಬಂದಿದ್ದ ಅಪರಿಚಿತನನ್ನು ನೋಡಿ ನೀಲಕ್ಕ ಅಣ್ಣನ ಹತ್ತಿರದಿಂದ ಎದ್ದು ಅಡಿಗೆ ಮನೆಗೆ ನಡೆದಳು.

"ಬಾರಪ್ಪ ಕರಿಯಣ್ಣ. ಬಡವರ ಮನೀಗೆ ಅಪರೂಪಕ್ಕ ಬಂದಿ."

"ಊರಾಗ ಇದ್ದಿದ್ದಿಲ್ಲಬೇ, ಅದಕ್ಕ ಬರಾಕ ಆಗಿದ್ದಿಲ್ಲಾ. ಹ್ಯಾಂಗ ಅದಾನ ಶಿವಣ್ಣ ?"

"ಮಂತ್ರ, ತಂತ್ರ, ತಾಯಿತ, ತೀರ್ಥಾ ನೀ ನೋಡಿದಾಂಗ ಡಾಕ್ತರು ಎಲ್ಲಾ ಆತಪ್ಪಾ, ಏನೇನೂ ಗುಣಾ ಇಲ್ಲಾ. ನಿನ್ನಿಂದ ತಿಳಿಗಂಜಿ, ನೀರು ಸುದ್ದಾ ದಕ್ಕವೊಲ್ಲದು. ನನ್ನ ಮಗಾ ಕೈಗೆ ಹತ್ತತಾನೋ, ಇಲ್ಲೋ ಅನ್ನೂ ಹಾಂಗ ಆಗೇದ ಕರಿಯಣ್ಣಾs. ಆ ದ್ಯಾವರಿಗೆ ಏನ ಕಣ್ಣ ಇಂಗಿ ಹೋಗ್ಯಾವೋ ಏನೋ" ಎನ್ನುತ್ತ ದುಃಖ ಒತ್ತರಿಸಿ ಬಂದು, ಮುಸುಕು ಹಾಕಿ ಅಳಹತ್ತಿದ ಬಸವ್ವನಿಗೆ ಕರಿಯಣ್ಣ ಸಮಾಧಾನ ಹೇಳಿದ :

"ಯಕ್ಕಾs ಅಳಬ್ಯಾಡಾ, ಸುಮ್ಕಿರು. ನಾ ಏನ ನಿನಗ ಹೊರಗಿನಾಂವ ಅಲ್ಲಾ. ನಿನ್ನ ಹಿತಕ್ಕ ಹೇಳ್ತಿನಿ. ನನ್ನ ಮಾತು ಕೇಳು. ಇಷ್ಟೆಲ್ಲಾ ಮಾಡೀದಿ. ಇನ್ನೊಂದು ಕೆಲಸಾ ಮಾಡು. ಇಕಾ, ನನ್ನ ಜೋಡಿ ಬಂದಾರಲ್ಲ ನಾಗನ-ಗೌಡರು, ಇವರು ಮಾಟಾ-ಮದ್ದು ತಗಿಯಾಕ ಭಾಳ ಹುಶಾರ ಅದಾರ. ಅದಕ್ಕs ಇವರ್ನ ಕೂರಕೊಂಡು ಬಂದೇನಿ. ಯಾರರೆ ನಿನಗ ಆಗಲಾರದವರು ಶಿವಣ್ಣಗ ಮಾಟಾ ಮಾಡಿಸಿದ್ದಾರು ಅಂತ ನನಗ ಅನಸ್ತೈತಿ. ಸುತ್ತಾ-ಮುತ್ತಾ ಪತ್ತು ಊರ ಮಂದಿ ಇವರ ಕಡೇನ ಬರತಾರ. ಇವರು ರಂಗಾ ಹೊಯ್ದು, ಪೂಜೀ ಮಾಡಿ, ಹುಂಜಾ ಬಲಿ ಕೊಟ್ಟರೂ ಅಂದರ, ಎಂಥಾ ಮಾಟ ಇದ್ದರೂ ಎದ್ದ ಬರತೈತಿ. ಇದೆಲ್ಲಾ ಅಮಾಸಿ ದಿನಾ ಸರಿರಾತ್ರಿಗೆ ಆಗಬೇಕ. ಮತ್ತ ಆಸ-ಪಾಸ ಯಾವ ಮಂದಿಗೂ ತಿಳೀಬಾರದ. ನೀ ಪೂಜಾ ಮಾಡ್ಸಾಕ ಹತ್ತೀದಿ ಅನ್ನೂದು ತಿಳಿದರ ಕೆಲಸಾ ಕೆಡತೈತಿ. ಇದೊಂದು

ಮಾಡೇ ಬಿಡೂಣು, ನೀ ಹೂಂ ಅನ್ನು. ನಾ ಅದಕ್ಕೆಲ್ಲಾ ಯವಸ್ಥಾ ಮಾಡತೀನಿ" ಎಂದು ದುಂಬಾಲು ಬಿದ್ದಾಗ ಬಸವ್ವ ಕೊನೆಯ ಪ್ರಯತ್ನ-ವೆಂದು ಅದಕ್ಕೂ ಸಿದ್ಧಳಾದಳು.

ಅಮವಾಸ್ಯೆಯ ದಿನ ಸರಿರಾತ್ರಿಗೆ ಪೂಜೆ ಮುಗಿದು, ಗೌಡಪ್ಪ ಹುಂಜದ ಕುತ್ತಿಗೆಯನ್ನು ಒಂದೇ ಏಟಿಗೆ ಕತ್ತರಿಸಿದ. ಒಳಗಿನ ಕೋಣೆಯಲ್ಲಿ ಶಿವಣ್ಣ ವಿಲಿ ವಿಲಿ ಒದ್ದಾಡುತ್ತ, ನೀಲಕ್ಕ ಬಾಯಿಗೆ ಬಿಟ್ಟ ನೀರನ್ನೂ ಗುಟುಕರಿಸದೆ ಜೀವ ಬಿಟ್ಟ. ಅವತ್ತು ಮುಂಜಾನೆಯಿಂದಲೂ ಅವನಿಗೆ ಪ್ರಜ್ಞೆ ಇರಲಿಲ್ಲ. ಹೊರಗೆ ಹೋಗಲು ಹೆದರಿ ಅಣ್ಣನ ಹಾಸಿಗೆಯ ಬಳಿ ಕುಳಿತ್ತಿದ್ದ ನೀಲಕ್ಕ, ಅಣ್ಣನ ಸಾವು ಕಂಡು ಹೆದರಿ ಬಾಯಿ ಬಡಿದುಕೊಳ್ಳುತ್ತ ಹೊರಗೆ ಓಡಿ ಬಂದಳು. ಕರಿಯ ಕೂಡಲೇ ಅವಳನ್ನು ಅಡ್ಡ ತಡೆದು ಬಾಯಿ ಒತ್ತಿ ಹಿಡಿದು ಕೋಣೆಗೆ ಎಳೆದೊಯ್ದ. ಪೂಜೆ ಮಾಡುತ್ತ ಕುಳಿತ ಬಸವ್ವ ಮೂಲೆಯಲ್ಲಿ ತೂಕಡಿಸುತ್ತಿದ್ದಳು. ಪೂಜೆ ಮುಗಿಸಿ ಪ್ರಸಾದ ತೆಗೆದು-ಕೊಂಡು ಬಂದಾಗಲೇ ಅವಳು ಅರ್ಧ ಬಾಯಿ ತೆಗೆದ ಮಗನ ಹೆಣವನ್ನು ಕಂಡದ್ದು.

ಅಣ್ಣ ಸತ್ತ ಒಂದು ತಿಂಗಳಲ್ಲಿ ನೀಲಕ್ಕ ಹಾಸಿಗೆ ಹಿಡಿದಳು. ಎದ್ದೊಡನೆ ವಾಂತಿ, ಹೊಟ್ಟೆಯಲ್ಲಿ ತಳಮಳ, ಮಗನ ಸಾವಿನಿಂದ ಹುಚ್ಚಿಯಂತಾಗಿದ್ದ ಅವ್ವನ ಮುಂದೆ ತನಗೆ ಏನಾಗಿದೆ ಎಂದು ಹೇಳಲೂ ಆಗದೆ, ಮುಚ್ಚಿಟ್ಟು-ಕೊಳ್ಳಲೂ ಆಗದೆ ಕೊರಗಿ ಕೊರಗಿ ತೊಳಲಾಡಿ, ಕೊನೆಗೆ ಒಂದು ದಿನ ಹಿತ್ತಲ ಬಾವಿಯ ತಳ ಕಂಡಳು ನೀಲಕ್ಕ. ಊರ ಜನ ಬಾಯಿಗೆ ಬಂದಂತೆ ಮಾತಾಡಿತು.

ಬಸವ್ವನಾದರೂ ಎಷ್ಟು ದಿನ ಅಳುತ್ತ ಮಲಗಿಯಾಳು ? ಎಷ್ಟು ದಿನ ನೆರೆಯವರು ಬಂದು ಉಪಚಾರ ಮಾಡಿ ಊಟ ಮಾಡಿಸಿಯಾರು? ಅದಕ್ಕೂ ಒಂದು ಮಿತಿ ಇದೆ ಅಲ್ಲವೇ ? ಮನೆಗೆ ಜನ ಬರುವುದು ಕಡಿಮೆಯಾಯಿತು. ಹೊಟ್ಟೆಗೆ ಹಸಿವೆ ಆಯಿತು. ಬಸವ್ವ ಎದ್ದಳು, ಅಡಿಗೆ ಮಾಡಿಕೊಂಡಳು ಉಂಡಳು, ತಿಂದಳು, ಮಲಗಿದಳು. ತಿಂಗಳೆರಡು ಕಳೆದ ಮೇಲೆ ಜೊತೆ-ಯವರೊಡನೆ ಮಾತಿಗೆ ಕೂತಳು. ಹರಟೆ ಹೊಡೆದಳು. ಸುಖ ಕಂಡು

ನಕ್ಕಳು. ದುಃಖ ಕಂಡು ಅತ್ತಳು. ಮೈಗೆ ದಣಿವಾಗುವವರೆಗೆ ದುಡಿದಳು. ಉಂಡಳು, ದಿನ ಕಳೆದವು. ಹಬ್ಬ ಮಾಡಿದಳು. ಹೊಸ ಸೀರೆ ಉಟ್ಟಳು. ಅಮವಾಸ್ಯೆಗೆ ಕರೆವ್ವನಿಗೆ ಹೋಳಿಗೆ ಎಡೆಮಾಡಿದಳು. ಗುಂಡಿನ ಟಿಕ್ಕೆ ಹಾಕಿಕೊಂಡು ಗೆಳತಿಯರೊಡನೆ ಹುಣ್ಣಿಮೆಗೆ ಯಲ್ಲವ್ವನ ಜಾತ್ರೆಗೆ ಹೋಗಿ ಕರಿಗಡಬು ಉಡಿತುಂಬಿ ಬಂದಳು. ಮತ್ತೆ ದಿನ ಉರುಳಿದವು. ಕತ್ತಲೆ ಆಯಿತು. ಬೆಳಕೂ ಆಯಿತು.

ಮತ್ತೊಂದು ಅಮವಾಸ್ಯೆಗೆ ಮಣಗಾಂವಿಗೆ ಫಕೀರಸಾಬನ ಸಮಾಧಿಗೆ ಹೋಗಿ ಬಂದಳು ಬಸವ್ವ, ಅವಳ ರಟ್ಟೆಯಲ್ಲಿ ಕರಿಯ ದಾರದಲ್ಲಿ ಕಟ್ಟಿದ ಚೀಟಿಯಿತ್ತು. ಅವ್ವಕ್ಕಗಳೆಲ್ಲ ಇದು ಯಾಕೆ ಎಂದು ಕೇಳುವ ಮೊದಲೇ ನೆರೆಮನೆಯ ಸಿದ್ದಿ ಸುದ್ದೀ ಹಬ್ಬಿಸಿದಳು.

"ಹಿತ್ತಲ ಬಾವಿ ಕಟ್ಟೀ ಮ್ಯಾಲೆ ಶಿವಣ್ಣ, ನೀಲಕ್ಕ ಇಬ್ರೂ ದೆವ್ವಾಗಿ ಕುಂತದ್ದು ಬಸವ್ವ ನೋಡಿದಳಂತ."

* * *



# ಅಭಿಲಾಷೆ

ಮನೆ ತುಂಬ ಜನ. ಅಪ್ಪ, ಅವ್ವ ಅಣ್ಣ, ತಮ್ಮ ಎಲ್ಲ ಇದ್ದರೂ ಪ್ರಿಯಾ ಏಕಾಕಿ. ಸ್ವಭಾವತಃ ಅವಳು ಮಿತಭಾಷಿಣಿ. ಬೇರೆಯವರ ಮಾತಿನ ಗದ್ದಲ ಸಹಿಸುವದಾಗದೆ ಏಕಾಂತ ಬಯಸುವ ಹುಡುಗಿ. ಇತ್ತೀಚೆಗಂತೂ ಅವಳ ಮಾತು ಇನ್ನೂ ಕಡಿಮೆಯಾಗಿತ್ತು. ಕೈಯಲ್ಲಿ ನೆಪಕ್ಕೆ ಹೆಣಿಕೆ, ಪುಸ್ತಕ ಏನಾದರೊಂದು ಇರುತ್ತಿದರೂ ಅರೆಗಣ್ಣು ಮುಚ್ಚಿ ಯೋಚಿಸುತ್ತಿರುವದೇ ಹೆಚ್ಚು. ಅವಳ ಆ ಭಂಗಿ ಕಂಡಾಗಲೆಲ್ಲ ಹೆರಿಗೆಗೆಂದು ತವರಿಗೆ ಬಂದ ಸುನಂದ ಳಿಗೆ ಅಕ್ಕನ ವಚನ ನೆನಪಾಗುವದು :

"ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ" ಎಂದು ತಂಗಿಯ ಮುಖದ ಮುಂದೆ ರಾಗವಾಗಿ ಹಾಡುವಳು. ಸುನಂದ ಮಾತಿನ ಮಲ್ಲಿ. ತವರಿನಲ್ಲಿ ಕೈಗೆ ಕೆಲಸವೂ ಇಲ್ಲದೆ, ಬಾಯಿಗೆ ರುಚಿ ಕಂಡ-ದ್ದೆಲ್ಲ ತಿನ್ನುತ್ತ ಓಡಾಡುತ್ತಿದ್ದ ಅವಳ ಬಾಯಿ ಇನ್ನೂ ಜೋರಾಗಿತ್ತು. ಅವಳ ಮಾತು ಸಹಿಸದೆ ಒಮ್ಮೊಮ್ಮೆ ಪ್ರಿಯಾ ಕೂಡ,

"ಅಕ್ಕಾ, ಆ ಚಕ್ಕುಲಿ ಚೂರು ಬಾಯೊಳಗ ಹಾಕ್ಕೋ, ಮಾತಾದ್ರೂ ಬಂದಾಗ್ತದ" ಎಂದು ಚೇಷ್ಟೆ ಮಾಡಿ, ತನ್ನನ್ನು ಹೊಡೆಯಲು ಬರುವ ಅಕ್ಕನ ಕೈಗೆ ಸಿಕ್ಕದೆ, ನಗುತ್ತ ಹೊರಗೆ ತೋಟಕ್ಕೆ ಓಡಿಬಿಡುವಳು. ಅವಳ ಅಪ್ಪ ತೋಟದಲ್ಲಿ ಸಂಪಿಗೆ ಮರದ ಕೆಳಗೊಂದು ಸಿಮೆಂಟಿನ ಕಟ್ಟೆ ಕಟ್ಟಿಸಿದ್ದರು. ಅಲ್ಲಿ ಕುಳಿತು ಸೂರ್ಯಾಸ್ತ ಸಮಯಕ್ಕೆ ಬಣ್ಣ ಬದಲಾಯಿಸುವ ಮೋಡ-ಗಳನ್ನು, ತಂಗಾಳಿಗೆ ತಲೆದೂಗುವ ಹೂಗಿಡಗಳನ್ನು ನೋಡುವದು ಪ್ರಿಯಳಿಗೆ ತುಂಬಾ ಪ್ರೀತಿಯ ಕೆಲಸ. ಹೊತ್ತು ಕಳೆದದ್ದೇ ಗೊತ್ತಾಗುತ್ತಿರಲಿಲ್ಲ ಅವಳಿಗೆ. ಕತ್ತಲಾದ ಮೇಲೆಯೇ ಮನೆಯ ಒಳಗೆ ಬರುವಳು. ಅವಳ ಏಕಾಂತಕ್ಕೆ ಆಗಾಗ ಸುನಂದಳಿಂದ ಭಂಗ ಬರುವದಿತ್ತು, ಹೂವು ಕಟ್ಟುತ್ತ, ಸ್ವೆಟರ್ ಹೆಣೆಯುತ್ತ ತಂಗಿಯನ್ನು ಮಾತಿಗೆ ಎಳೆಯುವವಳು ಸುನಂದ.

ಆ ದಿನ ಸಂಜೆ ಆಫೀಸಿನಿಂದ ಬಂದೊಡನೆ ಪ್ರಿಯಾ ತಿಂಡಿ ತಿಂದು ಬಂದು ಕಟ್ಟೆಯ ಮೇಲೆ ಕುಳಿತಳು, ಆದರೆ ಅವಳು ಒಬ್ಬಳೇ ಇರಲಿಲ್ಲ. ಅವಳ ಉಡಿಯಲ್ಲಿ ಪತ್ರಗಳಿದ್ದವು. ಜೊತೆಗೆ ಅವಳ ಮನಸ್ಸಿನಲ್ಲಿ ಆ ಪತ್ರ-ಗಳನ್ನು ಬರೆದ ವ್ಯಕ್ತಿಯೂ ಹರಿದಾಡುತ್ತಿದ್ದ. ಅಮೂರ್ತನಾಗಿದ್ದವನು ದಿನದಿನಕ್ಕೆ ಮೂರ್ತಸ್ವರೂಪನಾಗುತ್ತಿದ್ದ. ಕೇವಲ ಶಬ್ದಗಳೇ ಆಗಿರದೆ ಆ ಪತ್ರಗಳು ಅವನ ಸ್ವಭಾವದ, ವ್ಯಕ್ತಿತ್ವದ ಚಿತ್ರಗಳೇ ಆಗಿದ್ದವು. ಹೊರಗೆ ಮೌನಿಯಾಗಿ ಶಾಂತಳಾಗಿದ್ದರೂ ಅವಳ ಅಂತರಂಗದ ಮಾತಿಗಾಗಿ ಒದ್ದಾಡು-ತ್ತಿತ್ತು. ಮನಸ್ಸು ಅಶಾಂತವಾಗಿತ್ತು. ಹೃದಯಸಮುದ್ರ ತುಂಬಿ ಉಕ್ಕೇರಿ ಹೊರಚೆಲ್ಲಲಾಗದೆ ಇದ್ದಲ್ಲಿಯೇ ಭೋರ್ಗರೆಯುತ್ತಿತ್ತು. ಅಶಾಂತಿ ಹೆಚ್ಚಿ-ದಂತೆಲ್ಲ ಪತ್ರಗಳನ್ನು ಮತ್ತೆ ಮತ್ತೆ ಓದುವಳು. ಕ್ರಮವಾಗಿ ಜೋಡಿಸು-ವಳು. ಪ್ರೀತಿಯಿಂದ ನೇವರಿಸುವಳು. ಮುಖಕ್ಕೆ ಹಿಡಿದು ಮೂಸಿ ನೋಡಿ ಮುತ್ತು ಕೊಡುವಳು. ತನ್ನ ಈ ಆಟಕ್ಕೆ ಗಾಬರಿಯಾಗಿ ಅತ್ತಿತ್ತ ನೋಡು-ವಳು. ಯಾರೂ ಇಲ್ಲದಾಗಲೂ ತನ್ನಷ್ಟಕ್ಕೆ ತಾನೇ ನಾಚಿ ಗಿಡದಲ್ಲಿ ಅರಳಿದ ಗುಲಾಬಿಗಿಂತಲೂ ತನ್ನ ಮುಖ ಕೆಂಪಾಗಿಸುವಳು. ತನ್ನ ಈ ಹೊಸ ಪರಿ-ಯಿಂದ ಅವಳಿಗೆ ಆಶ್ಚರ್ಯ. ತನಗೆ ಹೀಗೇಕೆ ಆಗುತ್ತಿದೆ? ಇದಕ್ಕೇ ಪ್ರೀತಿ ಎನ್ನುತ್ತಾರೆಯೇ? ತನ್ನನ್ನೇ ಪ್ರಶ್ನಿಸಿಕೊಳ್ಳುವಳು, ಈ ಸಂವೇದನೆ ತನ್ನಲ್ಲಿ ಎಂದು ಹುಟ್ಟಿತು? ಹೇಗೆ ಬೆಳೆಯಿತು? ಈಗ ತನ್ನನ್ನು ಪೂರ್ತಿಯಾಗಿ ಆವರಿಸಿಕೊಂಡು ಒಂದು ತರದ ಆನಂದದಲ್ಲಿ ಮುಳುಗಿಸುತ್ತಿದೆಯಲ್ಲ! ಬೇರೆ ಜಗತ್ತೇ ಬೇಡವಾಗಿದೆ. ತಾನು, ಈ ಪತ್ರಗಳು ಅಷ್ಟಿದ್ದರೆ... ತಾನು ಮೊದಲಿನ ಪ್ರಿಯಾ ಅಲ್ಲ. ತನಗೆ ಹೊಸ ಜನ್ಮ ಬಂದಿದೆ. ಈ ಜನ್ಮದ ಹುಟ್ಟು...

ಪರ್...ಪರ್... ಒಣಗಿದ ಎಲೆಗಳ ಮೇಲೆ ನಡೆದು ಬರುವ ಶಬ್ದ. ಅಕ್ಕ ಬರುತ್ತಿದ್ದಾಳೇನೋ—ತಟ್ಟನೆ ಪತ್ರಗಳನ್ನು ಎದೆಯ ಒಳಭಾಗದಲ್ಲಿ ಮರೆಮಾಡಿಕೊಂಡು ಸೆರಗು ಹೊದ್ದುಕೊಂಡಳು. ಅದೂ ಒಂದು ಹೊಸ ಅನುಭವ. ಅವನು ಬರೆದ ಪತ್ರಗಳು ತನ್ನ ಎದೆಯ ಮೇಲೆ! ಮುಖ ರಾಗ ರಂಜಿತವಾಯಿತು.

"ಪ್ರಿಯಾ"

"ಏನಕ್ಕಾ ?" ಎತ್ತಲೋ ನೋಡುತ್ತಿದ್ದ ಪ್ರಿಯಾ ಅಕ್ಕನತ್ತ ತಿರುಗಿ-ದಳು. ಅವಳ ಹತ್ತಿರ ಬಂದು ಕೂಡ್ರುತ್ತ ಸುನಂದ ಅಂದಳು,

"ನೀ ಇತ್ತಿತ್ತಲಾಗ ಭಾಳ ಬದಲಿ ಆಗೀ ಅಂತ ಅನಸ್ತದ ನನಗ."

ಮಾತಿಗೆ ಮೊದಲು ಪ್ರಿಯಾ ನಕ್ಕಳು. "ನಾ ಏನೂ ಬದಲಾಗಿಲ್ಲ. ಇದ್ದಾಂಗs ಅದೀನಿ."

"ಮೊದಲಿಂದೂ ನಿಂದು ವಿಚಿತ್ರ ಸ್ವಭಾವ. unsocial, un-romantic ಇನ್ನೂ..."

"ಏ, ಏ, ಅಕ್ಕಾ ಹಾಂಗೆಲ್ಲಾ ಅನ್ನಬ್ಯಾಡಾ."

"ಮತ್ತೇನು ಅನ್ನಲಿ? ಇನ್ನೂ ಎಷ್ಟು ದಿನಾ ನೀನು ಹಿಂಗ ಒಬ್ಬಾಕಿನೇ ಇರಬೇಕಂತೀ ? ಮದುವಿ ಆಗಬೇಕು; ಮಜಾದಿಂದ ಸಂಸಾರ ಮಾಡಬೇಕು ಅಂತ ಎಂದೂ ಅನಸೂದೇ ಇಲ್ಲೇನು ನಿನಗ? ಅವ್ವ-ಅಪ್ಪಗ ನಿನ್ನದs ಚಿಂತಿ. ಎಂಥಾ ವರ ಬಂದರೂ ನೀ ಒಪ್ಪೂದಿಲ್ಲ, ಗಂಡಸಿನಂಗ ದುಡಿದು ರೊಕ್ಕಾ ತಂದರ ಆತೇನು ? ನೀನು ಹೆಣ್ಣು, ನೀ ಹೆಂಡತಿ ಆಗಬೇಕು, ತಾಯಿ ಆಗ-ಬೇಕು. ಆಗ ಬರ್ತದ ಜೀವನದಾಗ ಖರೇ ಮಜಾ, ಖರೇ ಸುಖಾ. ಹುಡುಗಿ, ನಿನಗೇನು ಗೊತ್ತದ ?"

"ನೀವೆಲ್ಲ ತಪ್ಪು ತಿಳಕೊಂಡೀರಿ ಅಕ್ಕಾ. ನನಗ ಮದುವಿ ಮಾಡಿಕೊಳ್ಳ-ಬಾರದು ಅನ್ನೂ ಹಟಾ ಏನೂ ಇಲ್ಲಾ. ಆದರೆ ಯಾಕೋ ನೋಡಲಿಕ್ಕೆ ಬಂದ ಯಾರನ್ನು ನೋಡಿದರೂ, ಇವರು ನನ್ನ ಜೀವನ-ಸಂಗಾತಿ ಆಗಬೇಕು, ಇವರ ಜೊತೆಗೆ ನಾನು ಬಾಳಬೇಕು ಅನ್ನೂ ಅಪೇಕ್ಷಾನs ಹುಟ್ಟೂದಿಲ್ಲ. ನಾ ಏನ ಮಾಡ್ಲಿ ?"

ತಂಗಿಯ ಮುಗ್ಧ ಮುಖ ನೋಡಿ ಸುನಂದಳಿಗೆ ಪ್ರೀತಿ ಉಕ್ಕಿ ಬಂದಿತ್ತು. ಅವಳ ತಲೆಯ ಮೇಲೆ ಮೃದುವಾಗಿ ಕೈಯಾಡಿಸುತ್ತ ಹೇಳಿದಳು.

"ಪ್ರಿಯಾ, ನೀ ಛಂದ ಇದ್ದೀ, ಕಲತಾಕಿ ಇದ್ದೀ, ಆದರ ಜಗತ್ತಿನ ಜ್ಞಾನ ಮನುಷ್ಯ-ಮನುಷ್ಯರ ಸಂಬಂಧದ ವಿಚಾರ ನಿನಗ ಇನ್ನೂ ತಿಳಿದಿಲ್ಲಾ. ನೀ

ಹಸುಕೂಸಿನಂಗ ಅಮಾಯಕ ಇದ್ದೀ. ಹೊರಗಿನ ಜಗತ್ತಿನ ಕಡೆ ಕಣ್ಣು ಬಿಟ್ಟು ನೋಡು, ನಿನ್ನ ಮನಸ್ಸಿನ ಬಾಗಿಲಾ ತಗೀ, ನಾಲ್ಕು ಜನರ ಕೂಡ ಬೆರತುಕೋ. ಮನಸ್ಸು ಬಿಚ್ಚಿ ಮಾತಾಡು. ಅವರ ಸುಖಾ, ದುಃಖಾ ಕೇಳು. ನಿಂದೂ ಅವರಿಗೆ,ಹೇಳುಅಪರಿಚಿತರು ಗಂಡಾಗಲಿ,ಹೆಣ್ಣಾಗಲಿ ಧೈರ್ಯದಿಂದ ಮಾತಾಡಿಸು. ನಿಂದೇ ಒಂದು ಜಗತ್ತು ಮಾಡಿಕೊಂಡು, ಮುಚ್ಚಿಕೊಂಡು ಕೂಡ್ರಬ್ಯಾಡಾ. ಸುಖಾಪಡೂ ಕಾಲಕ್ಕ ಸುಖಾ ಪಡಬೇಕು. ವಯಸ್ಸು ಹೋದ ವ್ಯಾಲೆ ಏನಾದರೂ ತಿರುಗಿ ಸಿಗೂದಿಲ್ಲ. ನಾ ನಿನಗಿಂತ ದೊಡ್ಡಾಕಿ ಇದ್ದೀನಿ, ಅನುಭವಿಕಳೂ ಇದ್ದೀನಿ. ನನ್ನ ಮಾತು ಖರೇ ಹೌದಲ್ಲೊ ನೀನೇ ವಿಚಾರ ಮಾಡು."

"ಅಕ್ಕಾ, ನೀ ಹೇಳೂದೆಲ್ಲಾ ಕೇಳಿಬರ ಖರೇ ಅನಸ್ತದ. ಆದರ ನೀ ಇದನ್ನೆಲ್ಲಾ ಇವತ್ತ ನನಗ ಯಾಕ ಹೇಳಲಿಕ್ಕೆ ಹತ್ತೀದಿ. ಏನರೆ ಕಾರಣ ಇರಬೇಕು ?"

"ಹೌದು ಪ್ರಿಯಾ, ಮೊನ್ನಿನ ರವಿವಾರ ನಿನ್ನ ನೋಡಲಿಕ್ಕೆ ಬಂದಿದ್ದರಲ್ಲಾ ಪ್ರಕಾಶ ಅಂತ..."

"ಹುಂ. ಬ್ಯಾಂಕಿನಾಗ ಕೆಲಸಾ ಮಾಡ್ತಾರ. ಡಬಲ್ ಡಿಗ್ರಿ ಅದ. ಆಸ್ತಿ-ಪಾಸ್ತಿ ಭಲೋ ಆದ ಅಂತ ಅವ್ವ ನಿನ್ನೆ ಹೇಳತಿದ್ದಳು.'

"ಹಾಂ ಹಾಂ ಅವರs. ನೋಡಲಿಕ್ಕೆ ಛೆಂದ ಅದಾರ. ಅವರೂ ನಿನ್ನ ಒಪ್ಪೇವಿ ಅಂತ ಹೇಳಿ ಕಳಿಸ್ಯಾರ. ಅದಕ್ಕ ಅಪ್ಪ ನಿನ್ನ ಒಂದ ಮಾತು ಕೇಳೂ ಅಂದರು."

"ಅವ್ವ-ಅಪ್ಪಗೂ ಮನಸ್ಸಿಗೆ ಬಂದಿರಬೇಕಲ್ಲ. ಅದಕ್ಕ ನನ್ನ ಕೇಳಿದರೇನು ?"

"ಹೌದು. ಎಲ್ಲಾರಿಗೂ ಮನಸ್ಸಿಗೆ ಬಂದದ. ಎದರೊಳಗ ಏನು ಕಡಿಮಿ ಅದ ಹೇಳು ?"

"ಉಂ, ಉಹುಂ. ಏನೂ ಕಡಿಮೆ ಇಲ್ಲಾ ಅನಸ್ತದ. ಆದರ, ಆದರ ಅಕ್ಕಾ ನಾ ವಿಚಾರ ಮಾಡಬೇಕು. ಆಮ್ಯಾಲೆ ಹೇಳ್ತೀನಿ. ಯಾಕೋ ಒಮ್ಮೆಲೆ ಒಪ್ಪಿಗೆ ಕೊಡಲಿಕ್ಕೆ ಮನಸ್ಸಿಗೆ ಬರವೊಲ್ಲದು: ವಿಚಾರ ಮಾಡ್ತೀನಿ ಅಕ್ಕಾ,

ಪ್ಲೀಜ್. ಅಪ್ಪಗ ನೀನ ಹೇಳಿ ಬಿಡು," ಅಕ್ಕನ ಕೈಹಿಡಿದು ಅಂಗಲಾಚಿದಳು ಪ್ರಿಯಾ.

ಸುನಂದ ನಗುತ್ತ, "ಆಗಲಿ ಹುಡುಗೀ ಭೋಲೋತ್ನಾಗ ವಿಚಾರ-ಮಾಡು. ಅಪ್ಪ ನಿನ್ನ ಮನಸ್ಸಿನ ವಿರುದ್ಧ ಏನೂ ಮಾಡೂದಿಲ್ಲ. ಆದರ ಇಂಥಾ ವರಾ ಮತ್ತ ಸಿಗೂದು ಕಷ್ಟ ಅನ್ನೂದು ಮರೀಬ್ಯಾಡಾ, ಹಾಂ." ತಂಗಿಯ ಬೆನ್ನು ಚಪ್ಪರಿಸಿ ಎದ್ದು ಹೋದಳು.

ಪ್ರಿಯಾ ಎದೆಯ ಮೇಲೆ ಕೈಯಿಟ್ಟುಕೊಂಡು ಆಕಾಶಕ್ಕೆ ಮುಖವೆತ್ತಿ ದೀರ್ಘವಾಗಿ ಉಸಿರೆಳೆದಳು. ಕಣ್ಣು ಮುಚ್ಚಿಕೊಂಡು ನಸುನಕ್ಕಳು. ಅಕ್ಕ ತನ್ನನ್ನು ಏನೆಂದು ತಿಳಿದುಕೊಂಡಿದ್ದಾಳಲ್ಲ ! ಹಸುಗೂಸಿನಂತೆ ಮುಗ್ಧಳು, ಅಮಾಯಕಳು ಎಂದೆಲ್ಲ ಹೇಳಿದಳು. ಆದರ ಕೊನೆಗೆ ತಾನು ಇತ್ತೀಚೆಗೆ ಬದಲಾಯಿಸುತ್ತಿದ್ದೇನೆ ಎಂದೂ ಹೇಳಿದಳು. ಅದು ಮಾತ್ರ ನಿಜ. ಈ ಬದಲಾವಣೆ ಯಾರಿಂದ ? ಅಲಕಾನಿಂದಲೇ ಇದರ ಪ್ರಾರಂಭ; ಅಲ್ಲವೇ ? ಅಲಕಾ ತನ್ನ ಸಹೋದ್ಯೋಗಿ. ವಯಸ್ಸೂ ತನ್ನದೇ. ಬಿಚ್ಚು ಮಾತಿನ ಸ್ವಚ್ಛ ಮನಸ್ಸಿನ ಹುಡುಗಿ ಅಲಕಾಳನ್ನು ತಾನು ಉಳಿದವರಿಗಿಂತ ಹೆಚ್ಚು ಹಚ್ಚಿಕೊಂಡದ್ದು ಸಹಜವೇ. ಸ್ನೇಹಜೀವಿ ಅಲಕಾಳ ಆಫೀಸು ವಿಳಾಸಕ್ಕೆ ಹೊಸ ಹೊಸ ಪೆನ್–ಫ್ರೆಂಡಿನಿಂದ ವಾರಕ್ಕೊಂದಾದರೂ ಪತ್ರ ಬಂದೇ ಬರುತ್ತಿತ್ತು. ಅವಳ ಈ ಹವ್ಯಾಸ ಕಡಲನ್ನೂ ಈಸಿತ್ತು. ಅವರಿಗೆಲ್ಲ ಅಷ್ಟೇ ಉತ್ಸಾಹದಿಂದ ಅಲಕಾ ಉತ್ತರ ಬರೆಯುವಳು. ಅದನ್ನು ನೋಡಿ ತನಗೆ ನಗು.

"ಏನು ಅಲಕಾ, ಭಾಳ ತನ್ಮಯ ಆಗಿ ಓದಲಿಕ್ಕೆ ಹತ್ತೀದಿ. ಪತ್ರ ಯಾರದು ? ಪಿಗ್ಮೀದೊ, ಏನು ಎಸ್ಕಿಮೊಂದೋ ? ಏನಂತಾನ ನಿನ್ನ ಗೆಳೆಯಾ ?"

"ಏ ಪ್ರಿಯಾ, ಮಾತಾಡಿದರೆ ಮುತ್ತು ಸುರಿತಾವೇನೋ ಅನ್ನುವ ಮೂದೇವಿ ನೀನು, ನಿನಗೇನು ಗೊತ್ತದ ಈ ಮಜಾ. ಜೀವನದಾಗ ಹೊರಗಿನ ಜಗತ್ತು ನೋಡಲಿಕ್ಕೆ ನನಗ ಅವಕಾಶ ಇಲ್ಲದಿದ್ದರೂ ಈ ಪತ್ರ-ದಿಂದ ಎಲ್ಲಾ ತಿಳೀತದ. ಜ್ಞಾನ ಬೆಳೀತದ. ಎಂಥಾ ಇಂಟರೆಸ್ಟಿಂಗ ಅದ ಈ ಪತ್ರ ಓದಿ ನೋಡು ಒಮ್ಮೆ ಇದನ್ನು." ತನಗೆ ಅಲಕಾ ಕೊಟ್ಟ ಪತ್ರ

ವನ್ನು ಕುತೂಹಲದಿಂದಲೇ ಓದಿದಳು ಪ್ರಿಯಾ. ಮತ್ತೊಂದು ದಿನ ಅಲಕಾ-ನಿಂದಲೇ ಕೆಲವರ ಅಡ್ರೆಸ್ ಕೇಳಿ ಪಡೆದುಕೊಂಡಳು. ಆದರೆ ಅಲಕಾಳದು ಒಂದು ಕರಾರು—ತಾನು ಬರೆಯುವ ಫ್ರೆಂಡುಗಳನ್ನು ಬಿಟ್ಟು ಬೇರೆಯವರಿಗೆ ಪ್ರಿಯಾ ಬರೆಯಬೇಕೆನ್ನುವದು. ಅದಕ್ಕೆ ಒಪ್ಪಿ ಹೊಸ ಲೆಟರ್‌ಪ್ಯಾಡ್ ಕೊಂಡು ತಂದು ಎನ್. ಎಸ್. ಕುಮಾರ ಎನ್ನುವ ಅಮೇರಿಕದಲ್ಲಿದ್ದ ಭಾರತೀಯ ವಿದ್ಯಾರ್ಥಿಗೆ ಪತ್ರವನ್ನು ಬರೆದಳು–ಪ್ರಿಯಾ, ಕೇವಲ ಮೋಜಿ-ಗಾಗಿ. ಎಂಟು–ಹತ್ತು ದಿನಗಳಲ್ಲೇ ಉತ್ತರ ಬಂದಿತು. ಪತ್ರ ಬಿಚ್ಚುವಾಗಲೇ ಬೆರಳುಗಳು ಸೂಕ್ಷ್ಮವಾಗಿ ನಡುಗುತ್ತಿದ್ದವು. ಯಾವದೋ ಸಾಹಸ ಮಾಡಿ-ದವರಂತೆ ಎದೆ ಡಬ್‌ಡಬ್ ಎನ್ನುತ್ತಿತ್ತು. ಇದೆಲ್ಲ ಯಾಕೆ ಆಯಿತೋ ಒಂದೂ ತಿಳಿಯಲಿಲ್ಲ ತನಗೆ. ಅನುಭವಿಸಿದ್ದು ಮಾತ್ರ ನಿಜ.

ಪ್ರಿಯಾ,

ನಿಮ್ಮ ಇಂಗ್ಲೀಷಿನ ಪತ್ರಕ್ಕೆ ನನ್ನ ಈ ಕನ್ನಡ ಉತ್ತರವನ್ನು ನೋಡಿ ನಿಮಗೆ ಆಶ್ಚರ್ಯವಾಗಿರಬಹುದು. ನಾನು ಕನ್ನಡಿಗನೇ. ಮಲೆನಾಡಿನ ಒಂದು ಹಳ್ಳಿ ನನ್ನ ಊರು. ನನ್ನ ತಂದೆ ವಿದ್ಯಾ ಇಲಾಖೆಯಲ್ಲಿ ಕೆಲಸ ಮಾಡಿ ನಿವೃತ್ತರಾಗಿದ್ದಾರೆ. ಸದ್ಯ ಬೆಂಗಳೂರಿನಲ್ಲಿ ಅಣ್ಣನ ಮನೆಯಲ್ಲಿದ್ದಾರೆ. ಒಬ್ಬಳೇ ಅಕ್ಕ, ಮದುವೆಯಾಗಿ ಶಿವಮೊಗ್ಗೆಯಲ್ಲಿದ್ದಾಳೆ. ನನ್ನ ತಾಯಿ ನಾನಿನ್ನೂ ಹಸುಗೂಸು ಇದ್ದಾಗಲೇ ತೀರಿ ಹೋದಳು. ತಾಯಿಯ ಪ್ರೀತಿ-ಯನ್ನು ನಾನು ಕಂಡಿಲ್ಲ. ಅದಕ್ಕೇ ಏನೋ ನನ್ನ ಮನಸ್ಸು ತುಂಬಾ ಮೃದು. ಬಹಳ ಬೇಗ ದುಃಖಕ್ಕೆ ಕರಗುತ್ತೇನೆ, ಸ್ನೇಹಕ್ಕೆ ಹಾತೊರೆಯುತ್ತೇನೆ..."

ತನ್ನ ಪರಿಚಯದೊಂದಿಗೆ ಕುಮಾರ ಪತ್ರ ಬರೆಯುವದನ್ನು ಪ್ರಾರಂ-ಭಿಸಿದ್ದ. ಸುಂದರವಾದ ಅಕ್ಷರದಲ್ಲಿ ಬರೆದ ಕನ್ನಡ ಪತ್ರವೆಂದೋ ಅಥವಾ ಅದರ ಆಕರ್ಷಕ ಒಕಣೆಗೊ, ಒಂದೇ ಪತ್ರ ಬರೆದು ಈ ಹೊಸ ಹವ್ಯಾಸ ನಿಲ್ಲಿಸಬೇಕೆಂದಿದ್ದ ತಾನು ಆದಕ್ಕೆ ಉತ್ತರವನ್ನೂ ಬರೆದಿದ್ದಳು, ಇದೆಲ್ಲ ನಡೆದದ್ದು ಆರು ತಿಂಗಳ ಹಿಂದೆ. ಅಲ್ಲಿಂದ ಮುಂದೆ ತಮ್ಮಿಬ್ಬರ ಪತ್ರ ವ್ಯವಹಾರ ಹವ್ಯಾಸ ಹೋಗಿ ಚಟವಾಗಿಬಿಟ್ಟಿತ್ತು.

ತನ್ನ ಇಂಜಿನಿಯರಿಂಗ್ ತರಬೇತಿ ನಡೆಯುತ್ತಿರುವ ಕಂಪನಿಯನ್ನು, ತನ್ನ ದಿನದ ದುಡಿತದ ಪರಿಚಯವನ್ನು ಕುಮಾರ ಮುಂದಿನ ಪತ್ರದಲ್ಲಿ ಮಾಡಿ ಕೊಟ್ಟಿದ್ದ. ಮತ್ತೊಂದರಲ್ಲಿ ನ್ಯೂಯಾರ್ಕಿನಿಂದ ಐವತ್ತು ಕಿಲೋಮೀಟರ್ ದೂರದಲ್ಲಿ ತಾನಿರುವ ಹಳ್ಳಿಯ ಅಥವಾ ವಿಸ್ತರಣೆಯ ವರ್ಣನೆ ಮಾಡಿದ್ದ ಇನ್ನೊಂದರಲ್ಲಿ ತನ್ನ ಆಹಾರದ ಬಗ್ಗೆ, ತನ್ನ ಲ್ಯಾಂಡ್ ಲೇಡಿಯ ಬಗ್ಗೆ ಬರೆದಿದ್ದ. ಪ್ರತಿ ವೀಕ್–ಎಂಡಿಗೂ ತಾನೂ ಬೇರೆ ಬೇರೆ ವಿಹಾರ ಸ್ಥಳಗಳಲ್ಲಿ ಭೆಟ್ಟಿಯಾಗುತ್ತಿದ್ದ ಸುಂದರ ತರುಣಿಯರ ಬಗ್ಗೆ ಬಿಚ್ಚು ಮನಸ್ಸಿನಿಂದ ಬರೆದಿದ್ದ. ಆ ಪತ್ರ ಓದಿದ ಮೇಲೆ ತನಗೆ ಏಳೆಂಟು ದಿನ ಸರಿಯಾಗಿ ನಿದ್ದೆ ಹತ್ತಿರಲಿಲ್ಲ. ಏನೇನೋ ತಳಬುಡವಿಲ್ಲದ ವಿಚಿತ್ರ ಕಲ್ಪನೆಗಳು, ಕನಸುಗಳು. ಅವುಗಳಲ್ಲಿ ತಾನು ಅಮೇರಿಕದಲ್ಲಿ ಕುಮಾರನೊಡನೆ ಸುಂದರವಾದ ವಿಹಾರ ಸ್ಥಳಗಳಲ್ಲಿ ವಿಹರಿಸುತ್ತಿದ್ದಳು. ತನ್ನ ಜೊತೆಯಲ್ಲಿದ್ದ ಕುಮಾರ ಬೇರೆ ಸುಂದರ ತರುಣಿಯರ ಹಿಂದೆ ಹೋದಾಗ ಬೆಚ್ಚಿ ಬೀಳುತ್ತ ಎಚ್ಚರಾಗುತ್ತಿದ್ದಳು. ಒಂದು ದಿನವಂತೂ ಅಳುತ್ತಿದ್ದಳಂತೆ. ಅಕ್ಕ ಮೈ ಕುಲುಕಾಡಿ ಎಬ್ಬಿಸಿದಾ-ಗಲೇ ಎಚ್ಚರ. ಯಾಕೆ ಅಳುತ್ತೀ ಎಂದು ಅಕ್ಕ ಕೇಳುತ್ತಿರುವಾಗ ತನಗೆ ತುಂಬಾ ನಾಚಿಕೆಯಾಗಿತ್ತು. ಏನು ಹೇಳಬೇಕು ಅಕ್ಕನಿಗೆ, ಕುಮಾರ ತನ್ನನ್ನು ಮುತ್ತಿಟ್ಟ ಎಂದು ಹೇಗೆ ಹೇಳಬೇಕು ? ಕುಮಾರ ಯಾರು ? ಅವಳಿಗೇನು ಗೊತ್ತು ? ಇವನು ತನ್ನನ್ನು ಯಾಕೆ ಇಷ್ಟು ಕಾಡಿಸುತ್ತಿದ್ದಾನೋ. ಯಾವ ಮುಹೂರ್ತದಲ್ಲಿ ಇವನ ಸ್ನೇಹ ಬೆಳೆಯಿತೊ ? ಹೋಗಲಿ, ನಾನು ತಾನೇ ಅವನಿಗೆ ಪತ್ರ ಬರೆಯಲು ಸುರು ಮಾಡಿದ್ದು. ನಾನೇ ಬಿಟ್ಟು ಬಿಟ್ಟರಾಯಿತು. ಸಿಟ್ಟಿನಿಂದಲೋ, ನಿರಾಶೆಯಿಂದಲೋ, ದುಃಖದಿಂದಲೋ ಒಂದೂ ತಿಳಿ-ಯದೆ ತಾನು ಅವನ ಪತ್ರಕ್ಕೆ ಉತ್ತರವನ್ನೇ ಬರೆಯಲಿಲ್ಲ. ಎಂಟು ಹತ್ತು ದಿನಗಳ ಮೇಲೆ ಪತ್ರದ ಬದಲು ಕೇಬಲ್ ಬಂದಿತ್ತು.

"ಪ್ರಿಯಾ ಆರೋಗ್ಯವಾಗಿದ್ದೀಯಾ ? ಪ್ಲೀಜ್ ಪತ್ರ ಬರೆ" ಎಂದ ಆ ಬೇಡಿಕೆಯ ಹಿಂದಿನ ಮನಸ್ಸು ಅರ್ಥವಾಗಿತ್ತು ತನಗೆ. ಬರೆಯಲು ತನಗೆ ವಿಷಯ ವೈವಿಧ್ಯವಿಲ್ಲದಿದ್ದರೂ ಇದ್ದುದರಲ್ಲೇ ಸ್ವಾರಸ್ಯವಾಗಿ, ಆಫೀಸಿನಲ್ಲಿ ನಡೆದ ಘಟನೆಯನ್ನು ಹಿಂದೆ ಯಾವಾಗಲೋ ಪಿಕ್‌ನಿಕ್ ಹೋದುದನ್ನು,

ಸಿನಿಮಾ ನೋಡಿದುದನ್ನು, ಅದು ತನಗೆ ಹಿಡಿಸದಿದ್ದರೆ ಯಾಕೆ ಎನ್ನುವವನ್ನು. ತನಗೆ ಸೇರುವ ಬಣ್ಣ, ಹೂ, ತಿಂಡಿಗಳ ಬಗ್ಗೆ ಬರೆಯುತ್ತಿದ್ದಳು. ತಿಂಗಳು ಗಳು ಕಳೆದರೂ ತಮ್ಮಿಬ್ಬರಲ್ಲೇ ಪತ್ರವ್ಯವಹಾರ ಮುಂದುವರೆದದ್ದರಿಂದ ಈಗ ಕೀಟಲೆ ಮಾಡುವ ಸರದಿ ಅಲಕಾಳದಾಗಿತ್ತು.

ತನ್ನ ಬಾಸ್ ತನ್ನನ್ನು ಪಾರ್ಟಿಗೆ ಮನೆಗೆ ಕರೆದಾಗ ಅವರ ಮಗಳನ್ನು ನೋಡಿದೆ. ತುಂಬಾ ಚೆಲುವೆ, ಜಾಣೆ ಅವಳನ್ನು ಬಿಟ್ಟು ಬರುವ ಮನಸ್ಸೇ ತನಗೆ ಇರಲಿಲ್ಲ—ಎಂದೆಲ್ಲಾ ಕುಮಾರ ವರ್ಣಿಸಿ ಬರೆದಾಗ ಪ್ರಿಯಾಳಿಗೇಕೋ ಕಸವಿಸಿ. ಒಂದು ಥರಾ ಸಿಟ್ಟು, ಅಸಮಾಧಾನ. ಯಾರು ಮಾತನಾಡಿಸಿದರೂ ಹರಿಹಾಯುವ ಮೂಡಿನಲ್ಲಿದ್ದಳು. ತನ್ನಲ್ಲಿಯ ಈ ಬದಲಾವಣೆ ನೋಡಿ ಅವಳಿಗೆ ಅಚ್ಚರಿ. ಕುಮಾರ ಆ ಹುಡುಗಿಯನ್ನು ಹೊಗಳಿದರೆ ತನಗೇಕೆ ಹೊಟ್ಟೆಕಿಚ್ಚು ? ಪ್ರೀತಿ ಇದ್ದಲ್ಲಿ ಅಸೂಯೆ ಇದ್ದೇ ಇರುತ್ತದೆ ಎನ್ನುವದು ನೆನಪಾದಾಗ ತನ್ನ ಮೈನವಿರೆದ್ದಿತು. ಮಾತು ಮತ್ತು ಬರಹ ಮನಸ್ಸಿಗೆ ಹಿಡಿಯುವ ಕನ್ನಡಿ. ಅವಳ ಅಸೂಯೆ, ಸಿಡುಕು ಪತ್ರದಲ್ಲೂ ವ್ಯಕ್ತವಾಗಿ- ತ್ತೇನೊ ? ಅದಕ್ಕೆ ಕುಮಾರನ ಉತ್ತರ:

"ಪ್ರಿಯಾ,

ನಿನ್ನ ಪತ್ರ ಬಿಸಿಯಾಗಿತ್ತು. ಯಾಕೆ ಆರೋಗ್ಯ ಚೆನ್ನಾಗಿಲ್ಲವೇ ? ಜ್ವರ ಬಂದಿದೆಯೇ ? ಬೇಗ ಔಷಧಿ ತೆಗೆದುಕೊಂಡು ಗುಣವಾಗು. ನಿನಗಾಗಿ ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಮೊನ್ನೆ ಮತ್ತೆ ಬಾಸ್ ಮನೆಗೆ ಹೋಗಿದ್ದೆ. ಲಿಲ್ಲಿಗಾಗಿ ಚಾಕಲೇಟ್ ಡಬ್ಬಿ ಒಯ್ದಿದ್ದೆ. ಮುದ್ದು ಮುದ್ದಾಗಿ ಥ್ಯಾಂಕ್ಸ್ ಹೇಳಿದಳು. ಅವಳ ತಾಯಿಯ ಅನುಮತಿಯಿಂದ ಅವಳನ್ನೆತ್ತಿಕೊಂಡು ಕೆನ್ನೆಯ ಮೇಲೆ ಮುತ್ತಿಟ್ಟೆ, ನನ್ನ ಕುತ್ತಿಗೆಯ ಸುತ್ತ ಕೈ ಹಾಕಿ 'ಅಂಕಲ್' ಎಂದಳು ಎರಡು ವರ್ಷದ ಲಿಲ್ಲಿ..." ಎಂದಿತ್ತು.

ಅಂದು ಅಲಕಾನಿಗೆ ಕಾಮತ್‌ನಲ್ಲಿ ಪ್ರಿಯಾಳಿಂದ ಪಾರ್ಟಿ. ಕಾರಣ? ಯಾಕೋ ಎಂದೂ ಬಿಟ್ಟಿದ್ದಳು ಪ್ರಿಯಾ ಹೃದಯ ತುಂಬಿ ನಗುತ್ತಾ. ಯಾಕೆ ಇಷ್ಟು ಸಂತೋಷ ಎನ್ನುವದು ತನ್ನ ಹೃದಯಕ್ಕೆ ಗೊತ್ತೇ ಇತ್ತು.

ಅವಳ ಕೈ ಎದೆಯಲ್ಲಿ ಮರೆಯಾಗಿದ್ದ ಪತ್ರಗಳನ್ನು ಈಚೆಗೆ ತೆಗೆದು ಒಂದೊಂದನ್ನೇ ಸವರುತ್ತಿದ್ದಾಗ ಅದನ್ನು ಓದಿದಷ್ಟೇ ಸಂತೋಷ. ಕುಮಾರ ತನ್ನ ಹತ್ತಿರ ಬಂದು ಕುಳಿತು ಮಾತನಾಡಿದಂತೆ ತನ್ನ ಅನಿಸಿಕೆ. ತನ್ನನ್ನು ಬಿಟ್ಟು ಅವನು ಸರಿಯಲೊಲ್ಲ. ಅವನನ್ನು ಅಗಲಿ ತಾನು ಇರಲಾರೆ. ಹೀಗೆ ತಮ್ಮದೇ ಲೋಕದಲ್ಲಿ, ಒಂದು ಅವರ್ಣನೀಯ, ಮಧುರ ವಾತಾವರಣದಲ್ಲಿ ತಾವಿಬ್ಬರೂ ವಿಹರಿಸುತ್ತಿದ್ದಾಗ ಮಧ್ಯೆ ಈ ಪ್ರಕಾಶ ಎನ್ನುವವ ಪ್ರವೇಶಿಸಿ ಬಾಂಬು ಹಾಕಿಬಿಟ್ಟಿದ್ದ. ಈಗ ತಾನು ಸುಮ್ಮನಿದ್ದರೆ ತನ್ನ ಮನಃಸ್ಥಿತಿಯನ್ನು ತಿಳಿಯದ ಮನೆಯವರು ಈ ಸಂಬಂಧವನ್ನು ನಿಶ್ಚಯಿಸಿಯಾರು ಎನ್ನುವ ಅಳುಕು ಪ್ರಿಯಾಳಿಗೆ. ವಿಚಾರ ಮಾಡಿ ಹೇಳುತ್ತೇನೆ ಎಂದು ಅಕ್ಕನಿಗೆ ಹೇಳಿಯಾಗಿದೆ. ಯಾವದೊಂದು ನಿರ್ಧಾರಕ್ಕೆ ಬರಲೇಬೇಕು ಎಂದು-ಕೊಳ್ಳುತ್ತಾ ಎದ್ದಳು ಪ್ರಿಯಾ.

"ಪ್ರಿಯಾ,

ಈ ಪತ್ರದ ಜೊತೆಗೆ, ನಿನ್ನ ಇಚ್ಛೆಯಂತೆ ನನ್ನ ಫೋಟೋ ಕಳಿಸು-ತ್ತಿದ್ದೇನೆ. ನಿನಗೆ ನನ್ನ ಫೋಟೋದ ಅಗತ್ಯವಿರಬಹುದು. ಆದರೆ ನಿನ್ನ ಚಿತ್ರ-ವನ್ನು ನಾನು ಎಂದೋ ಮನಸ್ಸಿನಲ್ಲಿ ಬರೆದುಕೊಂಡು ಬಿಟ್ಟಿದ್ದೇನೆ. ನಿನ್ನ ಕಣ್ಣುಗಳನ್ನು ನಾನೆಂದೂ ಮರೆಯಲಾರೆ. ನಾನಾರು ? ಈಗ ನೆನಪಾಯಿತೆ? ಎರಡು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ನಿನ್ನ ಸೋದರತ್ತೆಯ ಮಗಳನ್ನು ನನ್ನ ಗೆಳೆಯ ಸುನೀಲ್‌ಗೆ ಮದುವೆ ಮಾಡಿ ಕೊಟ್ಟಾಗ ನಮ್ಮಿಬ್ಬರ ಭೆಟ್ಟಿ-ಯಾಗಿತ್ತು. ಆಗಲೇ ನಾನು ಅಮೇರಿಕಕ್ಕೆ ಹೊರಟ್ಟಿದ್ದೆ. ಬೆಂಗಳೂರು ತೋರಿಸುವ ನೆಪದಲ್ಲಿ ನಿನ್ನೊಡನೆ ಎರಡು ದಿನ ಸುತ್ತಾಡಿದಾಗ ನಿನ್ನನ್ನು ಸಮೀಪದಿಂದ ಕಂಡು ಮೆಚ್ಚಿದ್ದೆ. ಮದುವೆಯಾಗಬೇಕೆಂದು ಸುನೀಲನ ಮುಖಾಂತರ ಕೇಳಿಸಿದೆ. ಆದರೆ ನನಗೆ ನಿರಾಶೆ ಕಾದಿತ್ತು. ಹುಡುಗಿಗೆ ಈಗಲೇ ಮದುವೆಯಾಗುವ ವಿಚಾರವಿಲ್ಲ ಎನ್ನುವ ಉತ್ತರ ಬಂದಿತು. ನಾನು ಅಮೇರಿಕಕ್ಕೆ ಹೊರಟು ಬಂದೆ. ನಿನ್ನ ಮೊದಲ ಪತ್ರ ಬಂದಾಗಲೇ ನೀನು ಯಾರು ಎನ್ನುವದು ತಿಳಿದು, ಹೃದಯ ಸಂತೋಷದಿಂದ ಹಾರಾಡಿತು. ಅದನ್ನು ಗಟ್ಟಿಯಾಗಿ ಕಟ್ಟಿ ಹಾಕಿ ಬರೀ ಪೆನ್ ಫ್ರೆಂಡ್ ಎನ್ನುವ ದೃಷ್ಟಿ-

ಯಿಂದಲೇ ಪತ್ರಗಳನ್ನು ಬರೆದೆ. ನಿನ್ನ ಬರವಣಿಗೆಯು ಧಾಟಿ ಬದಲಾಗು-ತ್ತಿದ್ದುದು ನನ್ನ ಹೃದಯಕ್ಕೆ ತಿಳಿಯಿತು. ಆತ್ಮೀಯವಾಗಿ ಬರೆಯುತ್ತ ಹೋದೆ.

ಪ್ರಿಯಾ, ಇನ್ನೊಮ್ಮೆ ಕೇಳುತ್ತೇನೆ. ನನ್ನವಳಾಗುವಿಯಾ ?

ಎಂದೂ ನಿನ್ನವನೇ,
ಕುಮಾರ."

ಪತ್ರವನ್ನೆತ್ತಿ ಮುತ್ತಿಟ್ಟ ಪ್ರಿಯಾ, "ಸರಿಯಾದ ಸಮಯಕ್ಕೆ ಬಾಗಿಲು ತಟ್ಟಿದ್ದೀರಿ ಕುಮಾರ" ಎಂದಳು.



# ಇತ್ತೀಚಿನ ಪ್ರಕಟಣೆಗಳು



---

Jatre Mugididittu — Rs. 21-00